# "ವಡ್ಡಾರಾಧನೆ"ಯ ಶೈಕ್ಷಣಿಕ ಚಿಂತನೆಗಳು

(ಕನ್ನಡ ವಿಷಯದಲ್ಲಿ ಎಂ. ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಶೋಧನ ಸಂಪ್ರಬಂಧ)

ಸಂಶೋಧಕರು :

**ಎನ್. ಜಿ. ಸರ್ವದೆ**

**ಬಾಗಲಕೋಟ**

ಮಾರ್ಗದರ್ಶಕರು :

**ಡಾ. ಬಿ. ಎಂ. ಪಾಟೀಲ**

ಕೆ. ಎಲ್. ಇ. ಸಂಸ್ಥೆಯ

ಎಸ್.ಸಿ.ಪಿ ಕಲಾ ಹಾಗೂ ಡಿ.ಟಿ.ಯ

ವಾಣಿಜ್ಯ ಮಹಾವಿದ್ಯಾಲಯ

ಮಹಾಲಿಂಗಪೂರ





**ಶ್ರೀ ಬಿ. ಆರ್. ದರೂರ ಸಂಶೋಧನ ಕೇಂದ್ರ,**

**ಹಾರೂಗೇರಿ ಜಿ. ಬೆಳಗಾವಿ**

ಮಾನ್ಯತೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೦೦೯

# “ವಡ್ಡಾರಾಧನೆ”ಯ ಶೈಕ್ಷಣಿಕ ಚಿಂತನೆಗಳು

(ಕನ್ನಡ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಸಂಶೋಧನ ಸಂಪ್ರಬಂಧ)

ಸಂಶೋಧಕರು
**ಎನ್.ಜಿ.ಸರ್ವದೆ**
ಬಾಗಲಕೋಟ

ಮಾರ್ಗದರ್ಶಕರು
**ಡಾ.ಬಿ.ಎಂ. ಪಾಟೀಲ**
ಕೆ.ಎಲ್.ಇ. ಸಂಸ್ಥೆಯ
ಎಸ್.ಸಿ.ಪಿ. ಕಲಾ ಹಾಗೂ ಡಿ.ಟಿ.ಯ
ವಾಣಿಜ್ಯ ಮಹಾವಿದ್ಯಾಲಯ
ಮಹಾಲಿಂಗಪೂರ









**ಶ್ರೀ.ಬಿ.ಆರ್. ದರೂರ ಸಂಶೋಧನ ಕೇಂದ್ರ,**
**ಹಾರೂಗೇರಿ ಜಿ. ಬೆಳಗಾವಿ**
ಮಾನ್ಯತೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೦೦೮

# ಪ್ರಮಾಣ ಪತ್ರ

'ವಡ್ಡಾರಾಧನೆಯ ಶೈಕ್ಷಣಿಕ ಚಿಂತನೆಗಳು' ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಡಾ.ಬಿ.ಎಂ. ಪಾಟೀಲ್ ಅವರ ಮಾರ್ಗದರ್ಶನದಲ್ಲಿ ನಾನು ಸಿದ್ಧಪಡಿಸಿದ್ದೇನೆ. ಹಾರೂಗೇರಿಯ ಶ್ರೀ.ಬಿ ಆರ್. ದರೂರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಕನ್ನಡ ವಿಷಯದಲ್ಲಿ ಎಂ. ಫಿಲ್. ಪದವಿಗಾಗಿ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಸಂಪ್ರಬಂಧವನ್ನು ಈ ಮೊದಲು ಇಡಿಯಾಗಿಯಾಗಲಿ, ಬಿಡಿಯಾಗಿಯಾಗಲಿ ನಾನು ಪ್ರಕಟಿಸಿರುವುದಿಲ್ಲವೆಂದೂ ಹಾಗೂ ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದೂ ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ : ಹಾರೂಗೇರಿ
ದಿನಾಂಕ : 30-09-05

**ಶ್ರೀ ಎನ್. ಜಿ. ಸರ್ವದೆ**
**ಸಂಶೋಧನ ವಿದ್ಯಾರ್ಥಿ**
**ಶ್ರೀ. ಬಿ. ಆರ್. ದರೂರ**
**ಸಂಶೋಧನ ಕೇಂದ್ರ, ಹಾರೂಗೇರಿ.**

# ದೃಢೀಕರಣ ಪತ್ರ

ಶ್ರೀ. ಎನ್.ಜಿ.ಸರ್ವದೆ ಇವರು ವಡ್ಡಾರಾಧನೆಯ ಶೈಕ್ಷಣಿಕ ಚಿಂತನೆಗಳು ಎಂಬ ಶೀರ್ಷಿಕೆಯ ಸಂಪ್ರಂಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಹಾರೂಗೇರಿಯ ಶ್ರೀ. ಬಿ. ಆರ್. ದರೂರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಕನ್ನಡ ವಿಷಯದಲ್ಲಿ ಎಂ.ಫಿಲ್.ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧವನ್ನು ಇವರು ಈ ಮೊದಲು ಇಡಿಯಾಗಿಯಾಗಲಿ, ಬಿಡಿಯಾಗಿಯಾಗಲಿ ಎಲ್ಲಿಯೂ ಪ್ರಕಟಿಸಿಲ್ಲವೆಂದೂ ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದೂ ದೃಢೀಕರಿಸುತ್ತೇನೆ.

ಸ್ಥಳ : ಹಾರೂಗೇರಿ
ದಿನಾಂಕ : 30-09-09

**ಡಾ.ಬಿ.ಎಂ. ಪಾಟೀಲ**
ಪ್ರಾಚಾರ್ಯರು
ಕೆ.ಎಲ್.ಇ. ಸಂಸ್ಥೆಯ
ಎಸ್.ಸಿ.ಪಿ. ಕಲಾ ಹಾಗೂ ಡಿ.ಡಿ.ಯ
ವಾಣಿಜ್ಯ ಮಹಾವಿದ್ಯಾಲಯ
ಮಹಾಲಿಂಗಪೂರ

# ಪರಿವಿಡಿ

## ಅಧ್ಯಾಯ – ೧

# ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವೈಧಾನಿಕತೆ

ಶಿವಕೋಟ್ಯಾಚಾರ್ಯ ಬರೆದಿರುವ 'ವಡ್ಡಾರಾಧನೆ' ಜೈನ ಧಾರ್ಮಿಕ (ನೋಂಪಿ) ಕಥೆಗಳ ಸಂಗ್ರಹ, ಇದು ಕ್ರಿ.ಶ.೯೨೦ರಲ್ಲಿ ರಚನೆಯಾಗಿದ್ದು, ಇದೊಂದು ನಮಗೆ ಪಂಪ ಪೂರ್ವಯುಗದಲ್ಲಿ ದೊರೆತಿರುವ ಕನ್ನಡದ ಪ್ರಾಚೀನ ಗದ್ಯ ಕೃತಿಯಾಗಿದೆ. ಈ ಕೃತಿಯಲ್ಲಿ ೧೯ ಜೈನ ಕಥೆಗಳು ನಿರೂಪಿತವಾಗಿದ್ದು, ಇದಕ್ಕೂ ಹರಿಷೇಣನ 'ಕಥಾಕೋಶ' ಮೂಲ ಆಕರ ಎಂದು ವಿದ್ವಾಂಸರ ಅಭಿಪ್ರಾವಾಗಿದೆ. ಇಲ್ಲಿ ಬರುವ ಕಥೆಗಳು ಜೈನ ಧರ್ಮದ ತತ್ವಾನುಗುಣವಾಗಿ ತಪಸ್ಸನ್ನಾಚರಿಸಿ ಸದ್ಗತಿಯನ್ನು ಪಡೆದು, ಮಹಾತ್ಮರಾಗುವ, ಜೀವನದ ಪೂರ್ವೋತ್ತರ ಭವಾವಳಿಯ ಕತೆಗಳು ನಿರೂಪಿತವಾಗಿದ್ದು, ಈ ವಡ್ಡಾರಾದನೆ ಕಥೆಯು ಬದುಕಿನ ಭಯಂಕರತೆಯನ್ನು ಬಿತ್ತಿಸಿ ಓದುಗರಿಗೆ ಮುಕ್ತಿಯ ಮಾರ್ಗವನ್ನು ಹಿಡಿಯುವಂತೆ ಮನೋಹರವಾಗಿ ಪ್ರಚೋದಿಸುವ ಧರ್ಮ ಬೋಧನೆಯ ಉದ್ದೇಶ ಆಡಗಿಸಿಕೊಂಡು, ಓದುಗರಿಗೆ ಧರ್ಮವನ್ನು ತಿಳಿಯುವಂತೆ ಮಾಡಿದೆ. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಈ ಸಣ್ಣ ಕಥೆಗಳ ಸಂಕಲಕ್ಕೆ ಮಹರ್ತ್ವದ ಸ್ಥಾನವಿದೆ. ಜೈನ ಧರ್ಮದ ಗ್ರಂಥವಾಗಿದ್ದರೂ ತನ್ನೊಡಲೊಳಗೆ ಅನೇಕ ಸಮಕಾಲಿನ ಶೈಕ್ಷಣಿಕ ಚಿಂತನೆಗಳು, ದೇಶಿಯ ಬಳಕೆ, ಹಳಗನ್ನಡದ ಭಾಷಾ ಸ್ವರೂಪ ದೃಷ್ಟಿಯಿಂದ ಗ್ರಂಥವು ವಿಶಿಷ್ಟ ಸ್ಥಾನ ಪಡೆದಿದೆ ಕಾರಣವಾಗಿ ಅಧ್ಯಾಯನದ ಪ್ರವೇಶ ಮಾಡಲಾಗಿದೆ.

ಪ್ರಾಚೀನ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಕಥಾ ಪರಂಪರೆಯನ್ನು ಗುರುತಿಸುವ ಮಹತ್ವದ ಮೈಲುಗಲ್ಲುಗಳಲ್ಲಿ ಶಿವಕೋಟ್ಯಾಚಾರ್ಯನ ವಡ್ಡಾರಾಧನೆಯು ಅತ್ಯಂತ ಮಹತ್ವದ ಗ್ರಂಥವಾಗಿದೆ. ೧೯ ಜೈನ ಧಾರ್ಮಿಕ ಕಥೆಗಳ ಸುಂದರವಾದ ಸಂಗ್ರಹ, ಈ ಕಥಾ ಸಂಕಲನವನ್ನು 'ಉಪಸರ್ಗ, ಕೇವಲಿಗಳ ಕಥೆ' ಎಂದು ಕರೆದಿರುವುದರಿಂದ ವೃದ್ಧರ ಆರಾಧನೆಯೇ ವಡ್ಡಾರಾಧನೆ. ಈ ಕಥೆಗಳ ಆರಂಭದಲ್ಲಿ ಕಥಾಸಾರ ಸೂಚಿಯಾದ ಒಂದೊಂದು ಗಾಹೆಗಳು ಬರುತ್ತವೆ. ನಡುನಡುವೆ ಅಲ್ಲಲ್ಲಿ ಸಂಸ್ಕೃತ ಶ್ಲೋಕಗಳು ಕಾಣಿಸಿಕೊಳ್ಳುತ್ತವೆ. ಜೀವಿ ತಾನು ಮಾಡಿದ ಕರ್ಮಗಳಿಗೆ ಅನುಗುಣವಾಗಿ ಭವಗಳಲ್ಲಿ ತೊಳಲಾಡಿ ಕಾಲಲಬ್ಧಿಗೆ ಅನುಗುಣವಾಗಿ ತಪಸ್ಸಿನ ಮೂಲಕ ಮೋಕ್ಷ ಪಡೆದು ಮುಕ್ತನಾಗುವ ಈ ಕಥಾಸಾರವನ್ನು ಅನುಸರಿಸಿ ಪ್ರಾಚೀನ ಕಾಲದ ಶೈಕ್ಷಣಿಕ ಚಿಂತನೆಗಳನ್ನು ಗಮನಿಸಿ ಅಧ್ಯಾಯನಕ್ಕೆ ಒಳಪಡಿಸಲಾಗಿದೆ.

ವಡ್ಡಾರಾಧನೆಯ ಕಥಾ ವಸ್ತು ಮತ್ತು ಉದ್ದೇಶಗಳು ಧರ್ಮ ಪ್ರಧಾನವಾಗಿದ್ದರೂ, ಸಾಹಿತ್ಯಕವಾದ ಮೇಲ್ಮೆಯನ್ನು ತೋರುತ್ತವೆ. ಇಲ್ಲಿನ ಕಥೆಗಳಲ್ಲಿ ಅಂದಿನ ಜನಸಾಮಾನ್ಯರ ಜೀವನದ ವಿಧಾನಗಳು, ಆಚಾರ–ವಿಚಾರಗಳು, ವ್ಯವಹಾರ, ಭಾಷೆಯ ರೀತಿ, ಸಮಾಜದ ಬೇರೆ ಬೇರೆ ಸ್ತರಗಳಿಗೆ ಸೇರಿದ ಪಾತ್ರಗಳ ನಡತೆ ಮುಂತಾದವುಗಳು, ಸಮಕಾಲಿನ ಸಾಮಾಜಿಕ ಅಂಶಗಳು, ಆಗಿನ ಆರ್ಥಿಕ ಸ್ಥಿತಿಗತಿಗಳು, ಸಾಂಸ್ಕೃತಿಕ ಜೀವನ ಸಂಪತ್ಭರಿತವಾಗಿದ್ದ, ಮಹಾವ್ರತ

ಒಟ್ಟಾರೆ ಶ್ರಾವಕರ ಅಣುವ್ರತಗಳಿಂದ ನೀತಿಯುಕ್ತವಾದ ಸಾಂಸ್ಕೃತಿಕ ಪರಿಸರವು ಸ್ಥಳೀಯ ಸತ್ತ್ವವನ್ನು ನೆಲದ ಗುಣವನ್ನು ಎತ್ತಿ ತೋರಿಸುವುದಾಗಿದೆ.

ವಡ್ಡಾರಾಧನೆಯಲ್ಲಿ ನಿರೂಪಿತವಾದ ಶೈಕ್ಷಣಿಕ ಚಿಂತನೆಗಳು, ಆ ಕಾಲದ ಸನ್ನಿವೇಶಗಳಿಗೆ ಅನುಗುಣವಾಗಿ ಒಳ್ಳೆಯ ಬೆಳಕು ಚೆಲ್ಲುತ್ತದೆ. ಆ ಕಾಲದ ವಿದ್ಯಾರ್ಥಿಯ ವ್ಯಾಸಂಗದ ಜೀವನ ಅತ್ಯಂತ ಅನುಶಾಸನ, ಸಂಯಮ, ಸಹನೆಗಳು, ಕಷ್ಟದ ಜೀವನವಾಗಿತ್ತು. ಶಿಕ್ಷಣದ ಪಠ್ಯಗಳು ಅವುಗಳು ಒಳಗೊಂಡಿರುವ ಮಹತ್ವ ಅಂಶಗಳು, ಕಲಿಯ ಬೇಕಾದ ನಿಯಮ, ಶೈಕ್ಷಣಿಕ ಗುರಿಗಳು, ವಿದ್ಯಾರ್ಥಿಗೆ ಕೊಡಬೇಕಾದ ಸಂಸ್ಕಾರಗಳು, ಪೂರಕ ಚಟುವಟಿಕೆ, ಬೋಧನಾ ವಿಧಾನ, ಗುರುಪರಂಪರೆ, ಗುರುವಿನ ಸ್ಥಾನ-ಮಾನ, ನೈತಿಕತೆ, ತತ್ವದರ್ಶನ, ಜ್ಞಾನ ದರ್ಶನ, ನೀತಿ ತತ್ವಗಳನ್ನು ತಿಳಿಯ ಪಡಿಸುವುದಾಗಿದೆ.

ಧರ್ಮದ ಹೂರಣವನ್ನು ತುಂಬುವುದು ಮುಖ್ಯ ಉದ್ದೇಶವಾದರೂ, ಪುಣ್ಯದ ಫಲವಾಗಿ ಮಾನವನಾಗಿ ಸ್ವರ್ಗಸುಖವನ್ನು ಪಡೆಯುತ್ತಾನೆ. ಪಾಪದ ಫಲವಾಗಿ ಅನೇಕ ಬಗೆಯ ನರಕ ನಿಶ್ಚಿತ ಎನ್ನುವ ತತ್ತೋಪದೇಶ ಪ್ರಧಾನವಾಗಿದೆ. ಮಾನವ ಬದುಕು ಕ್ಷಣಿಕ, ದೇಹ ಅಶಾಶ್ವತ, ಕ್ಷಮಾಗುಣವೇ ಶ್ರೇಷ್ಠತಮವಾದುದು, ಎಂಬ ಸಾರವನ್ನು ಸಾರುವ ಕಥಾ ನಿರೂಪಣೆ, ಜೈನ ಧರ್ಮದ ತತ್ತೋಪದೇಶದ ಚಿಂತನೆಯ ಮೂಲಕ ವಿವೇಚಿಸಲಾಗಿದೆ.

ಈ ಪ್ರಬಂಧವು ಒಟ್ಟು ಆರು ಅಧ್ಯಾಯಗಳನ್ನು ಒಳಗೊಂಡಿದೆ. ಮೊದಲನೆಯ ಅಧ್ಯಾಯದಲ್ಲಿ, ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿಯನ್ನು ವಿವರಿಸುವುದರೊಂದಿಗೆ ವಡ್ಡಾರಾಧನೆಯಲ್ಲಿ ಶೈಕ್ಷಣಿಕ ಚಿಂತನೆಗಳು ಅಧ್ಯಯನಕ್ಕೆ ಪೂರಕವಾದ ಸಾಂದರ್ಭಿಕ ಅಕಾರ ಗ್ರಂಥಗಳ ಅಧ್ಯಯನದ ಮೂಲಕ ವೈಧಾನಿಕತೆ ಚರ್ಚಿಸಲಾಗಿದೆ.

ಅಧ್ಯಾಯ ಎರಡರಲ್ಲಿ ವಡ್ಡಾರಾಧನೆ ಕೃತಿ, ಕೃತಿಕಾರ, ಕೃತಿಯ ಕಾಲ, ಕೃತಿಯ ಈ ಹೆಸರು, ಕಾಲದ ವಿಚಾರದಲ್ಲಿ ಹೊಂದಗೂಡದ ಮತಭೇದ, ಕೆಲವು ಅಂತಸ್ಥ ಆಧಾರಗಳಿಂದ ತಿಳಿಯ ಪಡಿಸುವುದನ್ನು ಅಲ್ಲಿಯ ಸೂಕ್ಷ್ಮತೆಗಳನ್ನು ಗುರುತಿಸಿ ಈ ಅಧ್ಯಾಯದಲ್ಲಿ ನಿರೂಪಿಸಲಾಗಿದೆ.

ಅಧ್ಯಾಯ ಮೂರರಲ್ಲಿ ವಡ್ಡಾರಾಧನೆಯ ಕಾಲದ ಶೈಕ್ಷಣಿಕ, ಪೂರಕ ಪರಿಸರಗಳಿಗೆ ಅನುಗುಣವಾಗಿ ಆ ಕಾಲದ ಮತ್ತು ಪ್ರದೇಶದ ಸಮಾಜಿಕ ಸ್ಥಿತಿಗತಿ, ರೂಢಿ, ನಂಬಿಕೆ, ಆರ್ಥಿಕ ಸ್ಥಿತಿಗತಿ, ರಾಜ್ಯಾಡಳಿತ ವ್ಯವಸ್ಥೆ, ಧಾರ್ಮಿಕ ವಿಚಾರ ಅಲ್ಲದೆ ಶ್ರಾವಕರಿಗೆ ಬೋಧನೆ ಮಾಡುವ ಉದ್ದೇಶದಿಂದ ಕಥಾನಿರೂಪಕನೆ ಬಳಸಿದ ಸುಲಭ ಮತ್ತು ಪರಿಣಾಮಕಾರಿ ಯಾದ ಭಾಷೆ, ನಿರೂಪಣಾ ಶೈಲಿ, ಶ್ರಾವಕರ ಬೋಧನೆಯ ಮೂಲಕ ವಿವರಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ, ಈ ಕೃತಿಯಲ್ಲಿ ಬರುವ ಶೈಕ್ಷಣಿಕ ಚಿಂತನೆ, ಶೈಕ್ಷಣಿಕ ಸನ್ನಿವೇಶಗಳು, ಈ ಕಾಲದ ಶೈಕ್ಷಣಿಕ ಸ್ವರೂಪ, ಉದ್ದೇಶ, ಜೈನಯತಿಗಳು ಶಿಕ್ಷಣದ ಮೂಲಕ ಜ್ಞಾನ ದರ್ಶನ, ಚಾರಿತ್ರ್ಯ, ತಪಸ್ಸು ಈ ನಾಲ್ಕು ಆದರ್ಶಗಳಲ್ಲಿ ಸತತ ಸಾಧನೆಮಾಡಿ ಕ್ರಮೇಣ ಮೋಕ್ಷ ಪ್ರಾಪ್ತಿ ಮಾಡಿಕೊಳ್ಳುವುದು ಶಿಕ್ಷಣದ ಗುರಿಗಳಾಗಿದ್ದಂತೆ ತೋರುತ್ತದೆ. ಅಲ್ಲಿ ಅನುಸರಿಸುವ ಅನುಶಾಸನಗಳು, ಪಠ್ಯಗಳು, ಸಾಧಕನಿಗೆ ಬೋಧನಾ ವಿಧಾನ; ಸಂಸ್ಕಾರಗಳು ಮತ್ತು ಗುರುಪಾರಂಪರಿಕವಾದ ಸಂಪ್ರದಾಯವನ್ನು ಕೆಲವು ಕಥೆಗಳಲ್ಲಿಯ ಪಾತ್ರಗಳ ಮೂಲಕ ಚರ್ಚಿಸಲಾಗಿದೆ. ಅಲ್ಲದೇ ಜೈನದರ್ಶನದ ತತ್ವದರ್ಶನ, ಜ್ಞಾನದರ್ಶನ, ನೀತಿಶಾಸ್ತ್ರವನ್ನು ವಿವೇಚಿಸಲಾಗಿದೆ.

ಅಧ್ಯಾಯ ಐದರಲ್ಲಿ ಭವಾವಳಿಯ ಕಥೆಗಳ ಸಾರವನ್ನು ಒಳಗೊಂಡಿದ್ದು, ಕಥಾವಲೋಕನದ ಮೂಲಕ ತೊಳಲ ಬೇಕಾಗಿರುವ ಜನ್ಮಗಳು, ನರಜನ್ಮವೇ ಮಾತ್ರವಾಗಿರದೆ ಪ್ರಾಣಿಜನ್ಮ, ದೇವಜನ್ಮಗಳ ಮೂಲಕ ಜನ್ಮಾಂತರಗಳಲ್ಲಿ ಹಿಂದಣ ಜನ್ಮದ ಇಚ್ಛಾ ಶಕ್ತಿಗಳು ಮುಂದುವರೆದು ಅವುಗಳನ್ನು ಈಡೇರಿಸಿಕೊಳ್ಳಲು ಪ್ರವೃತ್ತಿ, ತನ್ನ ತಪಸ್ಸಿನ ಮೂಲಕ ಬರುವ ಅಡ್ಡಿಗಳು ಅಂದರೆ ಉಪಸರ್ಗಗಳನ್ನು ಇಂದ್ರಿಯ ನಿಗ್ರಹಮೂಲಕ ಎದುರಿಸಿ ಈ ಪರೀಷಹಗಳನ್ನು ಜಯಿಸಿ ಮೋಕ್ಷ ಪಡೆಯುವುದು ಮುಖ್ಯಸಾಧನ ರೂಪದಲ್ಲಿ ನಿರೂಪಿಸಲಾಗಿದೆ.

ಕೊನೆಯ ಅಧ್ಯಾಯದಲ್ಲಿ ಪ್ರಸ್ತುತ ಸಂಪ್ರಬಂಧದ ಸಾರವನ್ನು ನಿರೂಪಿಸಲಾಗಿದೆ. ಪ್ರಾಚೀನ ಕಾಲದ ಶಿಕ್ಷಣದ ಸ್ವರೂಪ, ಉದ್ದೇಶ ಇವುಗಳ ಚಿಂತನದ ಪ್ರಸ್ತುತತೆ, ಅನನ್ಯತೆ ಕುರಿತು ಸಂಗ್ರಹ ರೂಪವಾಗಿ ವಿವೇಚಿಸಿ ಸಮರೋಪಗೋಳಿಸಲಾಗಿದೆ.

## ಅಧ್ಯಾಯ – ೨

# ವಡ್ಡಾರಾಧನೆ : ಕೃತಿ, ಕೃತಿಕಾರ ಮತ್ತು ಕಾಲ

## ೨.೧. ಕೃತಿಯ ಕುರಿತು :

ಗ್ರಂಥದ ಹೆಸರನ್ನು ಕುರಿತು ಅನೇಕ ಚರ್ಚೆ ನಡೆದಿದೆ. ವಡ್ಡಾರಾಧನೆ ಎಂಬ ಶಬ್ದದ ಮೂಲ 'ವೃಡ್ಡಾರಾಧನೆ'ಅಥವಾ 'ಬೃಹದಾರಾಧನೆ' ಎಂದು ಅದರ ನಿಷ್ಪತ್ತಿಯಿಂದ ತಿಳಿಯುವುದಾಗಿದೆ. ಎಂ. ಗೋವಿಂದ ಪೈಗಳು ಹೇಳುವಂತೆ 'ಬೃಹದಾರಾಧನೆ' ಎಂಬುದು ಪ್ರಾಕೃತ ರೂಪವೆಂದು 'ವೊಡ್ಡಾರಾದನೆ' "ಎಂಬ ಶಬ್ದರೂಪವನ್ನು ಮಾನ್ಯ ಮಾಡಿದ್ದಾರೆ ವೃದ್ಧ + ಆರಾಧನೆ ಎನ್ನುವಾಗ ಅದರ ಶಬ್ದಾರ್ಥವನ್ನು ಲಕ್ಷಿಸಿದಾಗ 'ವೃದ್ದ' ಎಂಬುದಕ್ಕೆ ವಯಸ್ಸಾದವನು (ಮಾಗಿದ) ಪೂರ್ಣವಾಗಿ ಬೆಳೆದವನು, ಪೂರ್ವಕಾಲದವನು ಎಂದು ಅರ್ಥವಾಗುತ್ತದೆ. ಈ 'ವೃದ್ಧ' ಎಂಬ ಶಬ್ದಕ್ಕೆ ಗೌರವಾರ್ಹವಾಗಿ ಶ್ರೇಷ್ಠ, ಜ್ಞಾನಿ, ಯತಿ, ಮಹಾಪುರುಷ ಎಂಬ ಅರ್ಥಗಳನ್ನು ಗಮನಿಸಬಹುದು".[೧] ಆದರಂತೆಯೇ 'ಆರಾಧನೆ' ಎಂಬುದಕ್ಕೆ ಸೇವೆ, ಪೂಜೆ, ಆದರಣೆ ಎಂಬ ಸಾಮಾನ್ಯ ಅರ್ಥಗಳು ಇವೆ. ಆದರೆ ಜೈನ ಸಿದ್ಧಾಂತದ ದೃಷ್ಟಿಕೋನದಲ್ಲಿ ಸಮ್ಯಕ ದರ್ಶನ, ಸಮ್ಯಕ್ ಜ್ಞಾನ, ಸಮ್ಯಕ್ ಚಾರಿತ್ರ್ಯ, ಸಮಕ್ ತಪಸ್ಸು ಈ ನಾಲ್ಕನ್ನು ಸಾಧಿಸುವುದೇ 'ಆರಾಧನೆ', ವೃದ್ಧರು (ಜೈನಯತಿಗಳು, ಜ್ಞಾನಿಗಳೂ) ಮಾಡಿದ ಸಫಲವಾದ ಆರಾಧನೆಗಳೇ ವಡ್ಡಾರಾಧನೆ ಈ ಗ್ರಂಥಕ್ಕೆ ಒಪ್ಪುವ ಹೆಸರಾಗಿದೆ, ಇದನ್ನು ಕೃತಿಕಾರನೇ ಗ್ರಂಥದ ಪೀಠಿಕೆಯಲ್ಲಿ ಈ ರೀತಿಯಾಗಿ ಸ್ಪಷ್ಟಪಡಿಸುತ್ತಾನೆ.

"ಶ್ರೀ ವೀರವರ್ಧಮಾನ ಭಟ್ಟಾರಕರ್ಗೆ ನಮಸ್ಕಾರಂ ಗೆಯ್ದು ದೇವೋಪಸರ್ಗ, ಮನುಷ್ಯೋಪಸರ್ಗ ತಿರಿಕೋಪಸರ್ಗಮ ಚೇತನೋಪಸರ್ಗಮೆಂದಿಂತು ಚತುರ್ವಿಧ ಮುಪ್ಪುಪಸರ್ಗಮುಮಂ ಪಸಿವುಂ ನೀರಟ್ಟ ಮೊದಲಾಗೊಡೆಯ ಇಪ್ಪತ್ತೆರಡು ಪರೀಷಹಂಗಳುಮಂ ಸೈರಿಸಿ ಆಯ್ದುಮಿಂದ್ರಿಯಂಗಳಂ ಗೆಲ್ದು ಬಾಹ್ಯಾಭ್ಯಂತರ ಪರಿಗ್ರಹಂಗಳಂ ತೊಱೆದು ದ್ವಾದಶವಿಧಮಪ್ಪ ತಪದೊಳ್ ನೆಗಟ್ಟು ಪ್ರಾಯೋಪಗಮನದಿಂ ಸಂನ್ಯಸನಂ ಗೆಯ್ದು ಕರ್ಮಕ್ಷಯಂ ಗೆಯ್ದು ಮೋಕ್ಷಕ್ಕೆ ವೋದ ಮತ್ತಂ ಸರ್ವಾರ್ಥ ಸಿದ್ಧಿಯೊಳ್ ಪುಟ್ಟಿದ ಮಹಾ ಪುರುಷರ್ಕಳ ಕಥೆಗಳಂ ಪೇಳ್ವಲ್ಲಿ.........".[೨]

ಈ ಕಥಾನಾಯಕರು ಮಹಾಪುರುಷರಾಗಿದ್ದು ನಾಲ್ಕು ಬಗೆಯ ಉಪಸರ್ಗ (ತಪೋವಿಘ್ನ)ಗಳನ್ನು ಸಹಿಸಿದವರು, ಹಸಿವು, ಬಾಯರಿಕೆ, ಚಳಿ, ಬಿಸಿ, ಕ್ರಿಮಿ, ಕೀಟಗಳ ಕಡಿತ ದಿಗಂಬರರಾಗುವ ತೊಂದರೆ ಮೊದಲಾದ ಇಪ್ಪತ್ತೇರಡು ಬಗೆಯಾಗಿರುವ ಪರೀಷಹ (ತೊಂದರೆ)ಗಳನ್ನು ಸೈರಿಸಿ ಪಂಚೇಂದ್ರಿಗಳನ್ನು ಹತೋಟಿಯಲ್ಲಿಟ್ಟು. ಆಂತರಿಕ, ಬಾಹ್ಯ ಪರಿಗ್ರಹಗಳನ್ನು ತ್ಯಜಿಸಿ, ಆರು ವಿಧದ ಬಾಹ್ಯ ತಪಸ್ಸನ್ನು ಆರು ಬಗೆಯ ಅಭ್ಯಂತರ ತಪಸ್ಸನ್ನು ಆಚರಿಸಿದವರು. ಇಂತಹ ತಪಸಾಧನೆಯೇ 'ತಪಸ್ಸಿನ ಆರಾಧನೆ'. ಜೈನ ಸಿದ್ಧಾಂತಗಳಲ್ಲಿ ದೃಢವಾದ ವಿಶ್ವಾಸ ಅಭಿರುಚಿಗಳನ್ನಿಡುವುದು 'ದರ್ಶನಾರಾಧನೆ' ಸಮ್ಯಕ್ ಜ್ಞಾನವನ್ನು

ಪಡೆಯಲು ಮಾಡುವ ಸಾಧನೆ 'ಜ್ಞಾನಾರಾಧನೆ' ಪಂಚಮಹಾವ್ರತ ಪಂಚ ಸಮಿತಿ, ತ್ರಿಗುಪ್ತಗಳನ್ನು ಭಾವ ಶುದ್ಧಿಯಿಂದ ನಡೆಸುವುದು ಚಾರಿತ್ರಾರಾಧನೆ ಈ ನಾಲ್ಕು ಬಗೆಯ ಆರಾಧನೆಗಳನ್ನು ಸಿದ್ಧಿಸಿಕೊಂಡಿರುವ ಮಹಾಪುರುಷರ ಕಥೆಗಳು ಈ 'ವಡ್ಡಾರಾಧನೆ'ಯಲ್ಲಿ ಇರುವುದರಿಂದ ಈ ಕೃತಿಗೆ 'ವಡ್ಡಾರಾಧನೆ' ಎಂಬುದು ಅನ್ವರ್ಥಕವಾದ ಹೆಸರಾಗಿದೆ.

## ೨.೨. ಕೃತಿಕಾರ

ಡಾ. ಡಿ. ಎಲ್. ನರಸಿಂಹಾಚಾರ್ಯರು ಜೈನ ಸಾಹಿತ್ಯದಲ್ಲಿ ಮೂರು ಜನ ಶಿವಕೋಟಿಗಳನ್ನು ಗುರುತಿಸಿದ್ದಾರೆ, ಪ್ರಾಕೃತದ 'ಭಗವತೀ ಆರಾಧನಾ'ದ ಕರ್ತೃ ಒಬ್ಬ ಶಿವಕೋಟ್ಯಾಚಾರ್ಯ ಅಥವಾ ಶಿವಾಕ್ಯ ಈತಾ ಒಂದನೆಯ ಶತಮಾನದಲ್ಲಿ ಇದ್ದಿರಬೇಕು. ಇವನು ಜೈನ ಶೌರಸೇನಿ ಪ್ರಾಕೃತ ಭಾಷೆಯ 'ಆರಾಧನಾ' ಎಂಬ ಗ್ರಂಥವನ್ನು ರಚಿಸಿದ್ದಾನೆ. ಕಾಲಕ್ರಮೇಣ "ಭಗವತೀ ಆರಾಧನಾ" ಮೂಲಾಧಾರನಾ ಎಂದು ಪ್ರಸಿದ್ಧವಾಯಿತು ಈತನು ಜಿನನಂದಿಗಣಿ, ಸರ್ವಗುಪ್ತಗಣಿ, ಆರ್ಯಮಿತ್ರನಂದಿ, ಎಂಬ ಗುರುಗಳ ಬಳಿ ಸೂತ್ರಾರ್ಥಗಳನ್ನು ಕಲಿತನಂತೆ "ಪೂರ್ವ ಪುರಾಣವನ್ನು" ರಚಿಸಿದ ಜಿನಸೇನಾಚಾರ್ಯ ಮತ್ತು "ಅಪಭ್ರಂಶ ಕಥಾಕೋಶ" ರಚಿಸಿದ ಶ್ರೀ ಚಂದ್ರ ಈತನನ್ನು ಸ್ಮರಿಸಿದ್ದಾರೆ.

ಇನ್ನೊಬ್ಬ ಶಿವಕೋಟಿ, ಇವನು ರಾಜ. ಶಿವಭಕ್ತನಾಗಿರುವುದರಿಂದ ಭೀಮೇಶ್ವರ ಲಿಂಗವನ್ನು ಪೂಜಿಸುತ್ತಿದ್ದನು. ಸ್ವಾಮಿ ಸುಮಂತ ಭದ್ರಾಚಾರ್ಯರ ಶಿಷ್ಯನಾಗಿದ್ದವನು. ಶಿವಭಕ್ತನಾದ ಶಿವಕೋಟಿಗೂ - ಸುಮಂತ್ತ ಭದ್ರಾಚಾರ್ಯರಿಗೂ ಪೈಪೋಟಿ ನಡೆದು ಸುಮಂತ ಭದ್ರನು ಶಿವಲಿಂಗದ ಸ್ಥಾನದಲ್ಲಿ ಪಾರ್ಶ್ವನಾಥ ಜಿನಬಿಂಬವನ್ನು ಮೂಡಿಸಿ, ಈತನ ಕಣ್ಣು ತೆರೆಯುವಂತೆ ಮಾಡಿದ್ದರಿಂದ ಜ್ಞಾನೋದಯವಾದ ಮೇಲೆ ಶಿವಕೋಟಿ ಮಹಾರಾಜ ತನ್ನ ಧರ್ಮವನ್ನು ಬಿಟ್ಟು ಜೈನಧರ್ಮವನ್ನು ಸ್ವೀಕರಿಸಿ ಸುಮಂತ ಭದ್ರನ ಶಿಷ್ಯನಾಗಿ ಸಕಲ ವಿದ್ಯಾಪಾರಾಂಗತನಾಗಿ 'ರತ್ನಮಾಲೆ' ಮೊದಲಾದ ಗ್ರಂಥಗಳನ್ನು ಬರೆದನು ಎಂಬ ವಿಷಯಗಳು ತಿಳಿದು ಬರುತ್ತದೆ. ಕನ್ನಡ ದೇವಚಂದ್ರ ಮತ್ತು ೨ನೇಯ ಗುಣವರ್ಮ ತಮ್ಮ 'ರಾಜಾವಳಿ ಕಥೆ" ಮತ್ತು "ಪುಷ್ಪದಂತ ಪುರಾಣ"ಗಳಲ್ಲಿ ಇವನನ್ನು ಹೇಳಿದ್ದಾರೆ. "ಪುಷ್ಪದಂತ ಪುರಾಣ"ದ ಹೇಳಿಕೆಯಂತೆ ಇವನು ತತ್ವಾರ್ಥ ಸೂತ್ರಕ್ಕೆ ಸಂಬಂಧ ಪಟ್ಟ ೯೬೦೦೦ ಗ್ರಂಥ ಪರಿಮಿತಿಯುಳ್ಳ ಗಂಧ ಹಸ್ತಿಮಹಾ ಭಾಷ್ಯವನ್ನು ಬರೆದರೂ, ಇವನ ಕಾಲ ಉಕ್ತವಾಗಿಲ್ಲ ಆದ್ದರಿಂದ ಇವನ ಗುರುವೆಂದು ಪ್ರಚುರವಾಗಿರುವ ಸುಮಂತ ಭದ್ರನ ಕಾಲದ ನೆರವಿನಿಂದ ಇವನ ಕಾಲವನ್ನು ಅರಿಯಬಹುದು.

"ಮೂರನೆಯ ಇನ್ನೊಬ್ಬ ಶಿವಕೋಟಿ, 'ರತ್ನಮಾಲೆ' ಎಂಬ ಚಿಕ್ಕ ಸಂಸ್ಕೃತ ಗ್ರಂಥದ ಕರ್ತೃ. ಈ ಗ್ರಂಥದ ಪರಿಸಮಾಪ್ತಿ ವಾಕ್ಯದಿಂದ ಇದನ್ನು ರಚಿಸಿದವನು ಸುಮಂತ ಭದ್ರಾಚಾರ್ಯನ ಶಿಷ್ಯನಾದ ಶಿವಕೋಟ್ಯಾಚಾರ್ಯ ಎಂದು ಉಕ್ತವಾಗಿದ್ದು, ಆದರೆ ರತ್ನಮಾಲೆ ತೀರಸಾಧಾರಣ ಗ್ರಂಥವಾಗಿದ್ದು, ಯಾವ ಪ್ರೌಢಿಮೆಯು ಯಾರ ಪ್ರಮಾಣ ಗ್ರಂಥವೆಂದು ಭಾವಿಸದ ಗ್ರಂಥ ಇದಾಗಿದ್ದು, ಕಲಿಕಾಲದಲ್ಲಿ ಜೈನಯತಿಗಳು ಎಲ್ಲಿ ವಾಸಮಾಡಬೇಕು ಎಂಬ ವಿಚಾರದ ಬಗ್ಗೆ 'ರತ್ನಮಾಲಾ'ದಲ್ಲಿ ಉಕ್ತವಾಗಿರುವ ಅಭಿಪ್ರಾಯ, ಭಗವತೀ ಆರಾಧಾನಾ ಕರ್ತೃ ಶಿವಕೋಟಿ ಮತ್ತು ಸುಮಂತ್ರ ಭದ್ರನ 'ರತ್ನಕರಂಡಕ ಶ್ರಾವಕಾಚಾರ'ಗಳಲ್ಲಿ ಉಕ್ತವಾಗಿರುವ ಅಭಿಪ್ರಾಯಕ್ಕೆ ವಿರೋಧವಿರುವುದರಿಂದ ಇದನ್ನು ರಚಿಸಿದವನು ಬೇರೇಯಾರೋ ಆಗಿದ್ದು, ಸುಮಂತಭದ್ರಾಚಾರ್ಯನ ಶಿಷ್ಯನಾದ ಶಿವಕೋಟಿಯ ತಲೆಗೆ ಕಟ್ಟಿರಬೇಕು",[೩] ಇಲ್ಲವೆ – ಅದೇ ಹೆಸರಿನ ಟೀಕಕಾರನಾಗಿರಬೇಕು, ಈತನ ಗುರು ರತ್ನಕರಂಡಕ ಶ್ರಾವಕಾಚಾರ್ಯದ ಸುಮಂತಭದ್ರನಾಗಿರದೆ ಬೇರೆ ಯಾರೋ ಇನ್ನೊಬ್ಬ ಸುಮಂತ ಭದ್ರನಾಗಿರಬೇಕು.

ಮೊದಲ ಇಬ್ಬರು ಶಿವಕೋಟಿಗಳು ಅತಿ ಪ್ರಾಚೀನ ಕಾಲಕ್ಕೆ ಸೇರಿದವರಾದುದರಿಂದ ಅವರ ಪ್ರಕೃತ ಕನ್ನಡ ವಡ್ಡಾರಾಧನೆಯು ಕರ್ತೃಗಳಲ್ಲಿ ಮೂರನೇಯ ಶಿವಕೋಟಿ ಅದರ ಕರ್ತೃವಾಗೀದ್ದಿರಬಹುದು ಇಲ್ಲವಾದರೆ ವಡ್ಡಾರಾಧನೆಯ ಕರ್ತೃ ಬೇರೊಬ್ಬ ಶಿವಕೋಟಿಯಾಗಿದ್ದನೆಂದು ಹೇಳಬೇಕಾಗುತ್ತದೆ ಎನ್ನುವ ಅಭಿಪ್ರಾಯವೇ ಸದ್ಯಕ್ಕೆ ಒಪ್ಪಿತವಾಗಿದೆ. ಇಲಿ ವಡ್ಡಾರಾಧನೆಯ ಕರ್ತೃ ಶಿವಕೋಟ್ಯಾಚಾರ್ಯನೆಂದು ಇಟ್ಟುಕೊಳ್ಳಲಾಗಿದೆ.

## ೨.೩. ವಡ್ಡಾರಾಧನೆಯ ಕಾಲ

ವಡ್ಡಾರಾಧನೆಯ ಕಾಲವನ್ನು ನಿರ್ಧರಿಸಲು ಸೂಕ್ತವಾದ ಬಾಹ್ಯ ಆಧಾರಗಳಾಗಲಿ ಕವಿಲಿಖಿತ ನೆರ ಕಾಲ ನಿರ್ದೇಶನವಾಗಲಿ ಇಲ್ಲ. ಕಾರಣ ಬೇರೆ ಆಂತರಿಕ ಆಧಾರಗಳನ್ನು ಅವಲಂಬಿಸಬೇಕಾಗಿದೆ.

"ಕೆ.ಬಿ.ಪಾಠಕರು "ವಡ್ಡಾರಾಧನೆ"ಯನ್ನು ತೊಜಿಗಲ್ಲಿನ ಶಾಸನದ ಸಮಕಾಲಿನ ಗ್ರಂಥ ಎಂದು ಭಾವಿಸಿ ತೊಜಿಗಲ್ಲಿನ ಶಾಸನದ ಕಾಲ ಕ್ರಿ.ಶ.೧೧೮೮ ಕಾರಣ 'ವಡ್ಡಾರಾಧನೆ'ಯ ಕಾಲವೂ ಅದೇ ಎಂದಿದ್ದಾರೆ."[೪]

ಕರ್ನಾಟಕ ಕವಿಚರಿತೆಕಾರರಿಗೆ ಸಮಗ್ರಗ್ರಂಥ ನೋಡಲು ಸಿಕ್ಕಿರಲಿಕ್ಕಿಲ್ಲ 'ಪಂಚಮಹಾಶಬ್ದ"ವನ್ನು ವಿವರಿಸಲು ಪಾಠಕ್ ಬರೆದ ಲೇಖನದಲ್ಲಿ ಉದ್ದರಿಸಿದ ಭಾಗಗಳನ್ನಷ್ಟೇ ನೋಡಿ ಅವರ ಕಾಲನಿರ್ಣಯವನ್ನು ಒಪ್ಪಿ "ವಡ್ಡಾರಾಧನೆಯ"ಯ ಕಾಲ ಕ್ರಿ.ಶ. ೧೧೮೦ ಎಂದಿದ್ದಾರೆ.

ಎಂ.ಗೋವಿಂದ ಪೈ ಅವರು ವಡ್ಡಾರಾಧನೆ ೯ನೆಯ ಶತಮಾನಕ್ಕಿಂತ ಈಚಿನದಲ್ಲ ಎಂದು ನಿರ್ಣಯಿಸಿದ್ದಾರೆ. ಅವರು ಕೇವಲ ಆಂತರಿಕ ಆಧಾರಗಳನ್ನು ಮಾತ್ರ ಇಟ್ಟುಕೊಂಡು ವಾದವನ್ನು ಮಂಡಿಸಿದ್ದಾರೆ ಅವರ ವಾದದ ಮುಖ್ಯಾಂಶಗಳು ಇಂತಿವೆ, ವಡ್ಡಾರಾಧನೆಯಲ್ಲಿ 'ದೀನಾರ್' ಎಂಬ ಗ್ರೀಕ್ ದೇಶದ ನಾಣ್ಯ, 'ದಮ್ಮ' ಎಂಬ ರೋಮ್ ದೇಶದ ನಾಣ್ಯಗಳ ಹೆಸರನ್ನು ಕವಿ ಬಳಸಿದ್ದಾನೆ. ಈ ನಾಣ್ಯಗಳ ಹೆಸರು ಉತ್ತರ ಭಾರತದಲ್ಲಿ ಕ್ರಿ.ಶ. ಎರಡನೆಯ ಶತಮಾನದ ನಂತರ ಬಳಕೆಯಲ್ಲಿದ್ದವು. ದಕ್ಷಿಣದ ವಡ್ಡಾರಾಧನೆಯಲ್ಲಿ ಉತ್ತರದ ಈ ಮಾತುಗಳು ಬಳಸಲಾಗಿದೆ. ಈ ನಾಣ್ಯಗಳ ಹೆಸರುಗಳನ್ನು ಬಳಸಿಕೊಂಡಿದ್ದ ಪ್ರಾಕೃತ ಗ್ರಂಥವೊಂದರ ಆಧಾರದಿಂದ ಇದು ರಚನೆಯಾಗಿರಬಹುದು ಆದ್ದರಿಂದ "ವಡ್ಡಾರಾಧನೆ" ಕ್ರಿ.ಶ. ಎರಡನೆಯ ಶತಮಾನದ ನಂತರ ರಚಿತವಾಗಿರುವ ಗ್ರಂಥ ಎಂದು ವಾದ ಮಂಡಿಸಿದ್ದಾರೆ.

"ಎಸ್.ಶ್ರೀಕಂಠಶಾಸ್ತ್ರಿಗಳು ತಮ್ಮ ಅಭಿಪ್ರಾಯಕ್ಕೆ ಯಾವ ಆಧಾರವನ್ನು ಕೊಡದೆ "ವಡ್ಡಾರಾಧನೆ" ಸುಮಾರು ಏಳನೆಯ ಶತಮಾನದಲ್ಲಿ ರಚಿತವಾಗಿರಬಹುದು ಎಂದು ಹೇಳಿದ್ದಾರೆ".[೫]

ಭದ್ರಬಾಹು ಭಟಾರರ ಕಥೆಯಲ್ಲಿ ಶ್ರವಣಬೆಳುಗೊಳವನ್ನು ಅದರ ಅತ್ಯಂತ ಪ್ರಾಚಿನ ಹೆಸರಾದ ಕಳ್ಬಿ, ಕಳ್ವಪ್ಪು, ಕೆಂದು, ಒಡೆಯ ಎಂಬ ಶಬ್ದ ಪ್ರಯೋಗಗಳಿವೆ. "ವಡ್ಡಾರಾಧನೆ"ಯ ಮೂಲವಾಗಿರುವ ಪ್ರಾಕೃತ ಗ್ರಂಥದಲ್ಲಿ "ಕಳ್ವಪ್ಪು" ಹೆಸರನ್ನು ಹೇಳಿರುವುದರಿಂದ 'ವಡ್ಡಾರಾಧನೆ' ಗ್ರಂಥ ಅದನ್ನು ಉಳಿಸಿಕೊಂಡಿರುವುದರಿಂದ ಕ್ರಿ.ಶ. ೬೫೦ಕ್ಕಿಂತ ಹಿಂದೆ ಈ ಗ್ರಂಥ ರಚಿತವಾಗಿರಬೇಕು.

ಡಾ. ಆ.ನೇ. ಉಪಾಧ್ಯೆ ಅವರು ವಡ್ಡಾರಾಧನೆಯು ಬಹುಶಃ ೧೧ನೆಯ ಶತಮಾನಕ್ಕೆ ಸೇರಿದ ಕೃತಿ ಎಂದು ಅಭಿಪ್ರಾಯ ಪಟ್ಟಿದ್ದಾರೆ ಅವರ ಈ ಅಭಿಪ್ರಾಯಕ್ಕೆ ನೀಡುವ ಕಾರಣಗಳು ಇಂತಿವೆ, "ವಡ್ಡಾರಾಧನೆಯ ಕಥೆಗಳ ಆದಿಯಲ್ಲಿ ಮತ್ತು ಕೆಲವು ಕತೆಗಳ ಕೊನೆಯಲ್ಲಿ ಕಾಣುವ ಪ್ರಾಕೃತದ "ಭಗವತೀ ಆರಾಧನಾ" ಕೃತಿಯಲ್ಲಿವೆ. ಈ ಪ್ರಾಕೃತ ಕೃತಿಯ ಕಾಲ ೧ನೇಯ ಶತಮಾನ ಕುಂದ ಕುಂದಾಚಾರ್ಯನ "ಪ್ರವಚನ ಸಾರ" "ಪಂಚಾಸ್ತಿಕಾಯ" ಮೊನೆದ ವಟಕೇಶ ಸ್ವಾಮಿಯ "ಮೂಲಾಚಾರ" ಪ್ರತಿಕ್ರಮಣ 'ಉಮಾಸ್ವಾತಿಯ "ಪ್ರಶಮರತಿ ಪ್ರಕರಣ', ಮೊದಲಾದವುಗಳ ಕಾಲ ೧ನೆಯ ಶತಮಾನದ "ಸಮಂತ ಭದ್ರನ" "ರತ್ನ ಕರಂಡಕ ಶ್ರಾವಕಾಚಾರ" ಇತ್ಯಾದಿ ವಿವಿಧ ಆಕಾರಗಳಿಗೆ ಇಲ್ಲಿಯ ಪ್ರಾಕೃತ ಗಾಹೆಗಳು ಸಂಸ್ಕೃತ ಶ್ಲೋಕಗಳು ಸೇರಿದವುವೆಂದು ಕಾರಣ ವಡ್ಡಾರಾಧನೆಯು ೮೯೮ಕ್ಕಿಂತ ಹಿಂದಿನದಲ್ಲವೆಂದೂ ಅವರು ಅಭಿಪ್ರಾಯ ಪಟ್ಟಿದ್ದಾರೆ".[೬]

"ವಡ್ಡಾರಾಧನೆಯ ಅತಿ ಪ್ರಾಚಿನ ಹಸ್ತಪ್ರತಿ ಕ್ರಿ.ಶ. ೧೪೦೩ರಲ್ಲಿ ಲಿಖಿತವಾಗಿದೆ. ಆದ್ದರಿಂದ ೮೯೮ – ೧೪೦೩ ಎಂಬ ವಿಸ್ತಾರವಾದ ಕಾಲದ ಅವಧಿಯನ್ನು ಕುಗ್ಗಿಸಿ ೧೧ನೆಯ ಶತಮಾನ ಎಂದು ನಿರ್ಣಯಿಸುತ್ತಾರೆ. ಈ ಗ್ರಂಥದಲ್ಲಿ ಪದಾದಿಯ ಪಕಾರಕ್ಕೆ ಸಾಧಾರಣವಾಗಿ 'ಹ' ಬರುವುದಿಲ್ಲ ಎಂಬ ಮುಖ್ಯವಾದ ಆಧಾರಗಳನ್ನು ಕೊಡುತ್ತಾರೆ. ಡಾ.ಡಿ.ಎಲ್. ನರಸಿಂಹಾಚಾರ್ಯರು ವಡ್ಡಾರಾಧನೆ ೧೧ನೆಯ ಶತಮಾನಕ್ಕಿಂತ ಹಿಂದಿನದು ಎಂಬ ತೀರ್ಮಾನಕ್ಕೆ ಬಂದಿದ್ದಾರೆ. ಅಲ್ಲದೆ ಈ ವಡ್ಡಾರಾಧನೆ ಕೃತಿಯಲ್ಲಿ ಹಳೆಗನ್ನಡಕ್ಕಿಂತಲೂ ಹಿಂದಿನ ಪೂರ್ವದ ಹಳೆಗನ್ನಡ ಪ್ರಯೋಗಳಿರುವುದನ್ನು ಲಕ್ಷೀಸಿದ್ದಾರೆ.

ಉದಾಹರಣೆಗೆ:

೧. ಆಖ್ಯಾತ ವಿಭಕ್ತಿ ಪ್ರತ್ಯಯ – ಅನ್‌ಗೆ ಬದಲು ಬನ್ ವಾಯುಭೂತಿಯಂಬೊನ್

ಷಷ್ಠೀದೀರ್ಘ : ವರ್ಣಿಯೆಂಬ ತೊೞ್ಯಾ ತಡಿಯೊಳ್

೨. ಬಳ್ಳ ಎಂಬ ಅರ್ಥದ ಒಡೆಯ ಪ್ರಯೋಗ : ಒಡೆಯನ್ ಒಡೆಯಳ್ ಒಡೆಯರ್ ಒಡೆಯವು ಎಂಬ ರೂಪಗಳ ಅಂಶಗಳು.

ಪ್ರಾಚಿನತೆಗೆ ಸಾಕ್ಷಿಯಾಗಿದ್ದು ವಡ್ಡಾರಾಧನೆ ಪಂಪಪೂರ್ವಯುಗಕ್ಕೆ ಸೇರಿದ್ದು ಪಂಪಭಾರತದ ಕಾಲವಾದ ಕ್ರಿ.ಶ.೯೪೧ಕ್ಕಿಂತ ಹಿಂದೆ ರಚಿತವಾಗಿರಬೇಕು. ೮೯೮ ರಿಂದ – ೯೪೧ರಅವಧಿ ಅಂದರೆ ಸುಮಾರು ೯೨೦ರಲ್ಲಿ ವಡ್ಡಾರಾಧನೆಯು ರಚಿತವಾಗಿರಬಹುದೆಂದು ಹೇಳಬಹುದು". [೭]

## ಟಿಪ್ಪಣಿಗಳು

೧. ಬಿ. ಕೇಶವ ಭಟ್ಟ : ವಡ್ಡಾರಾಧನೆ ಗದ್ಯಾನುವಾದ : ಪುಟ ಸಂಖ್ಯೆ – ೨ - ૩

೨. ಶಿವಕೋಟ್ಯಾಚಾರ್ಯ : ಸಂ. ಡಾ.ಡಿ.ಎಲ್. ನರಸಿಂಹಾಚಾರ್ಯ : ವಡ್ಡಾರಾಧನೆ : ಪುಟ ಸಂಖ್ಯೆ – ೪೫

೩. ಪ್ರೊ॥ಕೆ. ನಾಗೇಂದ್ರ : ಸಂ. ದಿವಂಗತ. ಸೀತಾರಾಮಯ್ಯ : ವಡ್ಡಾರಾಧನೆ – ಕವಿ, ಕಾವ್ಯಪರಂಪರೆ : ಪುಟ ಸಂಖ್ಯೆ – ೧೧

೪. ಅದೇ : ಪುಟ ಸಂಖ್ಯೆ – ೧೨

೫. ಅದೇ : ಪುಟ ಸಂಖ್ಯೆ – ೧೩

೬. ಡಾ. ಡಿ.ಎಲ್. ನರಸಿಂಹಾಚಾರ್ಯ : ವಡ್ಡಾರಾಧನೆ ಸಂಪಾದನೆ : ಪುಟ ಸಂಖ್ಯೆ – ೨೫

೭. ಅದೇ : ಪುಟ ಸಂಖ್ಯೆ – ೨೯

## ೩.೧. ಸಾಮಾಜಿಕ ಪರಿಸರ :

ವಡ್ಡಾರಾಧನೆಯಲ್ಲಿ ಸುಂದರವಾದ "ಸಾಮಾಜಿಕ ಜೀವನ ಚಿತ್ರವು ನಮ್ಮ ಕಣ್ಣೆದುರಿಗೆ ಮೂಡುತ್ತದೆ. ಆ ಕಾಲದಲ್ಲಿಯ ಸಮಾಜ ಸಾಮಾನ್ಯವಾಗಿ ರಾಜ್ಯ ಆಳುವ ವರ್ಗ (ಅರಸ, ಅರಸಿ, ಮಾಂಡಲಿಕ, ಮಂತ್ರಿ, ವಿವಿಧ ಸ್ತರದ ಅಧಿಕಾರಿಗಳು) ಬ್ರಾಹ್ಮಣರು, ಜೈನರು, ವ್ಯಾಪಾರಸ್ಥರು, ಬೇಸಾಯಗಾರರು, ವಿವಿಧ ಕಸಬುಗಳನ್ನು ಮಾಡುವ ಕೂಲಿ ಕುಂಬಳಿ ಮಾಡುವವರು, ಕೆಳವರ್ಗದವರು, ಅಂತ್ಯಜರು ಮೊದಲಾದವರನ್ನು ಒಳಗೊಂಡಿತು".[೧]

ಈ ಎಲ್ಲ ವರ್ಗಗಳ ಜನರು ನೆಲಸಿದ ಪ್ರದೇಶ ನಾಡು ಎಂದು ಕರೆಯಲಾಗುತ್ತಿತು. ಇದರ ರಾಜಧಾನಿ ನಗರ ಅಥವಾ ದೊಡ್ಡ ಊರು ಪೊಟಲ್ ಆಗಿತ್ತು. ಹಳ್ಳಿಗೆ ಉರ್ ಆಕಳ ದಡ್ಡಿಗೆ ತುರು-ಪಟ್ಟಿ ಎಂಬ ಹೆಸರುಗಳಿದ್ದವು.

"ಅರಸ, ಅರಸಿ ಮತ್ತು ಪರಿವಾರದವರು, ಮಾಂಡಲಿಕರು, ಸಿರಿವಂತ ವ್ಯಾಪಾರಸ್ಥರು ಪ್ರಸಾದ – ಅರಮನೆ ಮಹಲುಗಳಲ್ಲಿ ಮೇಲ್ವವರ್ಗದವರು ಉಪ್ಪರಿಗೆ ಇದ್ದ ದೊಡ್ಡಮನೆಗಳಲ್ಲಿ ಮದ್ಯಮವರ್ಗದವರು ಸಾಮಾನ್ಯ ಮನೆಗಳಲ್ಲಿ ವಾಸಿಸುತ್ತಿದ್ದರು. ಜೈನ ಮುನಿಗಳು ಸಾದ್ವಿಯರು ಆಗಾಗ ಬಸದಿ ಮಠಗಳಲ್ಲಿ ತಂಗುತ್ತಿದ್ದರೆಂಬುದು ಕಥೆಗಳಲ್ಲಿ ಸಂದರ್ಭಾನುಸಾರವಾಗಿ ಉಲ್ಲೇಖವೂ ದೊರೆಯುತ್ತದ".[೨] ಅರಸರು ಅತ್ಯಂತ ವಿಲಾಸೀ ಜೀವನವನ್ನು, ಆತನ ಪರಿವಾರದವರು ಸುಖಮಯವಾದ ಬದುಕನ್ನು, ಅರಸರಲ್ಲಿ ಬಹು ಪತ್ನಿತ್ವ ಪ್ರಚಲಿತವಿತ್ತು. ಉಳಿದ ವರ್ಗದ ಜನರು ಕೂಡಾ ಉಣ್ಣಲು ಸಾಕಷ್ಟು ಅನ್ನ, ತೊಡಲು ಬಟ್ಟೆ ಇರಲು ಮನೆ ಇತ್ಯಾದಿಗಳೊಂದಿಗೆ ಸಾಮಾನ್ಯವಾಗಿ ಸುಖದಿಂದಿದ್ದರು.

ಈ ಕೃತಿಯಲ್ಲಿ ಮೂಡಿರುವುದು ಬಹುಮಟ್ಟಿಗೆ ಸಮಾಜದ ಉನ್ನತ ವರ್ಗದ ಜನಗಳ ಜೀವನ ಚಿತ್ರ. ಸಮಾಜದ ಕೆಳವರ್ಗದ ಜನಗಳ ಜೀವನದ ವಿಚಾರ ಅಲ್ಪಸ್ವಲ್ಪ ಮಾತ್ರ. ಈ ಕಥೆಗಳಲ್ಲಿ ದೀಕ್ಷೆಗೊಂಡ ಜೈನಮುನಿಗಳಾಗಿ ಮೋಕ್ಷಗಾಮಿಗಳಾಗಿರುವವರು. ರಾಜರ ಅರಮನೆಯಲ್ಲಿ ಧನಿಕರ, ಪರದರ ಮನೆಯಲ್ಲಿ ಎಂಬುದು ಕಾಣುತ್ತವೆ. ಆದರೆ "ಭದ್ರಬಾಹು ಭಟಾರರ ಕಥೆ", "ಗುರುದತ್ತ ಭಟಾರರ ಕಥೆ" ಮೊದಲಾದ ಕೆಲವು ಕಥೆಗಳಲ್ಲಿ ಮಾತ್ರ ಈ ಸಾಧಕರು ಮೊದಲು ಸಾಮಾನ್ಯರ ಮನೆಗಳಲ್ಲಿ ಹುಟ್ಟಿ ಆಮೇಲೆ ತಮ್ಮ ಸಾಧನಾ ಬಲದಿಂದ ಮೇಲೇರುತ್ತ ಹೋಗುತ್ತಾರೆ.

"ಗುರುದತ್ತಭಟಾರರ ಕಥೆ"ಯಲ್ಲಿ ಹಳ್ಳಿಯ ಕೃಷಿಕ ಜೀವನದ ಒಂದು ಉತ್ತಮ ಚಿತ್ರವಿದೆ. ಮಳೆ ಬರುತ್ತಿದ್ದಂತೆಯೇ ರೈತನು ಉಳಲು ಹೋಗುವುದು; ಹದ ನೋಡಿ ಉಳುವುದು; ಹೆಂಡತಿ ಬುತ್ತಿ ತರುವುದು; ಹಸಿದ ಗಂಡ ಕೋಪದಲ್ಲಿ ಹೆಂಡತಿಯನ್ನು

ಬಡಿಯುವುದು; ಅಗಿನ ಅವನ ಹುಂಬತನ – ಇವೇ ಮೊದಲಾದ ವಿಚಾರಗಳು ತುಂಬಾ ನೈಜವಾಗಿದೆ ಇದನ್ನು ನೋಡಿದಾಗ ಕೃತಿಕಾರ ಹಳ್ಳಿಯ ಜೀವನವನ್ನು ಸಮೀಪದಿಂದ ನೋಡಿದ್ದಾನೆ.

ಹಳ್ಳಿಯ ಜೀವನದ ಇನ್ನೊಂದು ವಿಶೇಷ ಚಿತ್ರ ವೃಷಭಸೇನ ಭಟಾರರ ಕಥೆಯಲ್ಲಿದೆ. ಪ್ರದ್ಯೋತ ರಾಜನು ಕಾಡಾನೆಗಳನ್ನು ಹಿಡಿಯುವುದಕ್ಕಾಗಿ ಕಾಡಿಗೆ ಬಂದು ಖೇಡ ಎಂಬ ಊರಿಗೆ ಬಂದು ಹಸಿವೆ ಬಾಯಾರಿಕೆಯಿಂದಲೂ, ದಾರಿ ನಡೆದ ಶ್ರಮದಿಂದಲೂ, ಬಹಳ ಆಯಾಸದಿಂದ ಊರಬಾವಿಯ ಹತ್ತಿರ ಬಂದು ಅರಸನು ನೀರು ಕೇಳುವದು, ಅವನಿಗೆ ಜಿನದತ್ತೆ ನೀರು ಹುಯ್ಯುವ ಚಿತ್ರ ತುಂಬ ಜೀವಂತವಾಗಿದೆ. ಸಹಜ ಸುಂದರವಾಗಿದೆ. ಇಂಥ ದೃಶ್ಯಗಳನ್ನು ಹಳ್ಳಿಯ ಕಡೆ ಕಾಣವುದಾಗಿದೆ. ಒಂದು ಸಾಮಾಜಿಕ ಪದ್ಧತಿಯ ವಿಚಾರವು ಚಾಣಾಕ್ಯರಿಸಿಯ ಕಥೆಯಲ್ಲಿ ಪ್ರಸ್ತಾಪಿತವಾಗಿದೆ. ಸಂತೋಷ ಸಮಾರಂಭಗಳಲ್ಲಿ ನೆಂಟರಿಷ್ಟರನ್ನು ಆಹ್ವಾನಿಸಿ ಊಟೋಪಚಾರ ಮಾಡಿಸುವುದು. ಆಗಿನ ಕಾಲದಲೂ ಇತ್ತು. ಅಲ್ಲದೆ ಧನಿಕರಿಗೆ ಹೆಚ್ಚು ಮರ್ಯಾದೆಯನ್ನು ಕೊಟ್ಟು ಬಡವರನ್ನು ಕಡೆಗಣಿಸುವವರೂ ಈ ಹಿಂದೆಯೇ ಇದ್ದರೆಂಬುದಕ್ಕೆ ಚಾಣಾಕ್ಯರಿಸಿಯ ಕಥೆ ಸಾಕ್ಷಿಯಾಗಿದೆ. ಮಯೂರ ವಂಶದ ದೊರೆ ಕುಮುದನೆಂಬುವನ ರಾಣಿ ಗರ್ಭಿಣಿಯಾಗುತ್ತಿದ್ದಂತೆಯೇ ಅವಳಿಗೆ ಚಂದ್ರನನ್ನು ನುಂಗಬೇಕೆಂಬ ಬಯಕೆ ಉಂಟಾಗುತ್ತದೆ.

ಇನ್ನೊಂದು ಕಥೆಯಾದ "ಗುರುದತ್ತ ಭಟಾರರ ಕಥೆಯಲ್ಲಿ" ಶ್ರೇಣಿಕ ಮಹಾರಾಜನ ರಾಣಿ ಧನಶ್ರೀಗೆ ಮಳೆಗಾಲದಲ್ಲಿ ಆನೆಯನ್ನು ಹತ್ತಿಕೊಂಡು ಕಾಡಿಗೆ ಹೋಗಿ ಆಲದ ಹಣ್ಣನ್ನು ಕಿತ್ತು ತಿನ್ನಬೇಕು ಮತ್ತು ಬೆಳಗಿನ ಮನೋಹರಿ ಎಂಬ ಜಾವದಲ್ಲಿ ಬಿಳಿಯ ಕಾಡಾನೆಯನ್ನು ನೋಡಬೇಕೆಂಬ ಬಯಕೆಗಳುಂಟಾದುದು. ಹೀಗೆ ಈ ಎರಡು ಕಥೆಗಳಲ್ಲಿ ಗರ್ಭಿಣಿಯರಿಗೆ ಉಂಟಾಗುವ ವಿಚಿತ್ರ ಬಯಕೆಗಳು ನಿರುಪಿತಗೊಂಡಿವೆ.

ಬಾಲ್ಯ ವಿವಾಹವು ಹಿಂದಿನಿಂದಲೂ ನಡೆದುಕೊಂಡು ಬಂದಿರುವುದೇನು ನಿಜ ಆದರೆ ಅದಕ್ಕಿಂತಲೂ ಒಂದು ಹೆಜ್ಜೆ ಮುಂದೆ ಹೋಗಿ ಮಗು ಹುಟ್ಟುವುದಕ್ಕೆ ಮುಂಚೆಯೇ ಗರ್ಭದಲ್ಲಿದ್ದಂತೆಯೇ ಅದನ್ನು ಇಂಥವರಿಗೆ ಕೊಟ್ಟು ಮದುವೆ ಮಾಡುತ್ತೇನೆಂದು ತೀರ್ಮಾನ ಮಾಡುವ ಜನ ಈ ಕಾಲದಲ್ಲಿ ಇದ್ದರೆಂಬುದಕ್ಕೆ ವಿಚಿತ್ರ ಘಟನೆಯ ಕಥೆ 'ಸುಕುಮಾರ ಸ್ವಾಮಿಯ ಕಥೆ'ಯಲ್ಲಿ ನಾಗಶ್ರೀ ಕೇಳಿದ ಕಥೆಗಳಲ್ಲಿ ಇಂಥ ಸಂಗತಿ ಬರುತ್ತದೆ. ಇಂಥ ಸಾಮಾಜಿಕ ಪಿಡುಗುಗಳು ಬಹು ಹಿಂದಿನಿಂದಲೂ ನಡೆದು ಬಂದಿವೆ ಎಂಬುದು ಗೊತ್ತಾಗುತ್ತದೆ.

ಮಕ್ಕಳಿಲ್ಲದವರು ನಾಗರದೇವತೆಗಳಿಗೆ ಪೂಜೆ ಸಲ್ಲಿಸಿದರೆ ಮಕ್ಕಳಾಗುತ್ತವೆ ಎಂಬ ನಂಬಿಕೆ ಈಗಲೂ ನಮ್ಮಲ್ಲುಂಟು. "ಸುಕುಮಾರ ಸ್ವಾಮಿಯ ಕಥೆ"ಯಲ್ಲಿ ಸೂರ್ಯಮಿತ್ರಾಚಾರ್ಯರೂ ಅಗ್ನಿಭೂತಿಮುನಿಯೂ ಹತ್ತೇಂಟು ಗ್ರಾಮನಗರಗಳನ್ನು

ಸಂಚರಿಸಿ ಮತ್ತೆ ಚಂಪಾನಗರಕ್ಕೆ ಬಂದು ಕಂಬಳನಾಗ ಶಂಬರನಾಗ ಪಾಂಡುಕನಾಗ ಎಂಬ ಹೆಸರಿನ ನಾಗಾಲಯದಲ್ಲಿ ತಂಗಿದರು. ಅಂದು ಪಂಚಮಿ ನಾಗಶ್ರೀಯ ತನ್ನ ಗೆಳತಿಯರಾದ ಮಂತ್ರಿ, ಹೆಗ್ಗಡೆ, ರಾಜಶ್ರೇಷ್ಠಿ ನಿಯೋಗಿಗಳ ಹೆಣ್ಣು ಮಕ್ಕಳೊಂದಿಗೆ ಆ ನಾಗಾಲಯಕ್ಕೆ ಬಂದು ಪೂಜೆ ಮಾಡುವ ನಂಬಿಕೆಯೊಂದರ ಪ್ರಸ್ತಾಪ ಇದೆ.

ಜನ ಸಮಾನ್ಯರಿಗೆ ಜೋತಿಷ್ಯರಲ್ಲಿ ಅಪಾರ ನಂಬಿಕೆ ಇತ್ತು ಮತ್ತು ತಮಗೇನಾದರೂ ತೊಂದರೆಯಾದಾಗ ಅಥವಾ ಏನಾದರೂ ಕಳೆದುಕೊಂಡಾಗ ಜೋಯಿಸರನ್ನು ಕೇಳಿ ವಿಷಯ ತಿಳಿದುಕೊಳ್ಳುತ್ತಿದ್ದರು. ಸುಕುಮಾರ ಸ್ವಾಮಿಯ ಕಥೆಯಲ್ಲಿ ಸೂರ್ಯಮಿತ್ರನು ದೊರೆ ಎರವಲು ಕೊಟ್ಟಿದ್ದ ಉಂಗುರವನ್ನು ಕಳೆದುಕೊಂಡು ಸುಧರ್ಮಾಚಾರರಲ್ಲಿ ಕೇಳಿ ತಿಳಿದುಕೊಳ್ಳುತ್ತಾನೆ. ಋಷಿಗಳು ಮಾತ್ರವಲ್ಲದೆ ಬೇರೆ ಜೋತಿಷ್ಯ ಬಲ್ಲವರೂ ಇದ್ದು ಅವರೂ ಭವಿಷ್ಯವನ್ನು ಹೇಳುತ್ತಿದ್ದರು. ಸುಕುಮಾರ ಸ್ವಾಮಿಯ ಕಥೆಯಲ್ಲಿ ಒಬ್ಬ ಜೋಯಿಸನು ಸುಕುಮಾರಸ್ವಾಮಿ ಯಾವಗ ಸನ್ಯಾಸಿಗಳ ಮುಖ ನೋಡುತ್ತಾನೋ ಆಗ ತಪಸ್ಸಿಗೆ ಹೋಗುತ್ತಾನೆಂದು ಭವಿಷ್ಯ ಹೇಳಿರುತ್ತಾರೆ. ಇಂಥಹ ಇನ್ನೊಂದು ಉದಾಹರಣೆಯನ್ನು "ಸುಕೌಶಲ ಸ್ವಾಮಿಯ ಕಥೆ"ಯಲ್ಲಿ ವಿಜಯಭದ್ರಭಟಾರರು ಜಯಾವತಿಗೆ ಮಗನ ಮುಖವನ್ನು ನೋಡಿದಾಗ ತಂದೆಯೂ ಋಷಿಯಾಗಿರುವ "ತಂದೆಯ ಮುಖವನ್ನು ನೋಡಿದಾಗ ಮಗನೂ ತಪಸ್ಸಿನಲ್ಲಿ ತೊಡಗುತ್ತಾರೆ ಎಂದು ಭವಿಷ್ಯ ನುಡಿಯುತ್ತಾರೆ" ಈ ನಂಬಿಕೆಗಳು ಜನಗಳಿಗೆ ಜೋತಿಷ್ಯದಲ್ಲಿದ್ದ ನಂಬಿಕೆಯನ್ನು ತಿಳಿಸುತ್ತದೆ.

ದೊರೆಗಳು ನ್ಯಾಯನಿಷ್ಟರೂ, ಸತ್ಯಸಂದರೂ, ಧರ್ಮಪರರೂ ಆಗಿದ್ದರು. ಈ ೧೯ ಕಥೆಗಳಲ್ಲಿ ಬಹುಮಟ್ಟಿಗೆ ರಾಜರಲ್ಲಿ ಉತ್ತಮ ದೊರೆಗಳಲ್ಲಿ ಆದರ್ಶಗುಣಗಳು ಕಂಡು ಬರುತ್ತವೆ. ಯಾವ ದೊರೆಯು ಪ್ರಜೆಗಳಲ್ಲಿ ಕೀಳಾಗಿ ವರ್ತಿಸುತ್ತಿರಲಿಲ್ಲ. ಹೀನ ಬುದ್ಧಿ ತೋರಿಸುತ್ತಿರಲಿಲ್ಲ ಪ್ರಜೆಗಳ ಕಷ್ಟಗಳಲ್ಲಿ ಬಾಗಿಗಳಾಗಿ, ಪ್ರಜೆಗಳಿಂದ ದೂರು ಬಂದ ಕೂಡಲೇ ವಿಚಾರಣೆ ನಡೆಸಿ ಪರಿಹರಿಸುತ್ತಿದ್ದರು.

ರಾಜರಲ್ಲಿ ಕೆಲವರು ಬೇಜವಬ್ದಾರಿಯವರು, ಅಸಮರ್ಥರು, ಮಹಾಕಾಮಿಗಳು, ಚಂಚಲ ಚಿತ್ತರೂ, ಇದ್ದರೂ. ಸುಂದರ ಯುವತಿಯನ್ನು ಕಂಡ ಕೂಡಲೆ ಮೋಹಿಸಿ, ಮದುವೆಯಾಗಲು ಬಹುಮಟ್ಟಿಗೆ ಹೆಗ್ಗಡೆಗಳನ್ನು ಮಂತ್ರಿಗಳನ್ನು ಕಳಿಸಿ ಹೆಣ್ಣಿನ ತಂದೆ – ತಾಯಿಗಳನ್ನು ಬೇಡಿ ಮದುವೆಯಾಗುತ್ತಿದ್ದರು.

ಒಟ್ಟಿನಲ್ಲಿ ಸಾಮಾನ್ಯವಾಗಿ ವಡ್ಡಾರಾಧನೆಯ ಎಲ್ಲ ಕಥೆಗಳಲ್ಲೂ ರಾಜ ಮಹಾರಾಜರ ಜನರ ವಿಚಾರ ಬರುತ್ತದೆ, ಜೈನ ಸನ್ಯಾಸಿಗಳ ಕಥೆಗಳೇ ಇದ್ದು, ಪೂರಕವಾಗಿ ರಾಜರ ಕಥೆಗಳು

ಬಂದಿವೆ. ಕೆಲವು ರಾಜರ ಕಥೆಗಳು ಜೈನ ಸನ್ಯಾಸಿಗಳ ಜೀವನದ ಪೂರ್ವಾರ್ಧ, ಅನೇಕ ರಾಜರು ಧರ್ಮ ವತ್ಸಲರಾಗಿ ಜೈನ ಭಕ್ತರಾಗಿ ನಡೆದುಕೊಳ್ಳುತ್ತಾರೆ.

ಹೀಗೆ ವಡ್ಡಾರಾಧನೆಯಲ್ಲಿ ವೈವಿಧ್ಯಮಯವಾದ ಸಾಮಾಜಿಕ ಜನಜೀವನ ಚಿತ್ರಿತವಾಗಿದೆ.

## ೩.೨. ಸಾಂಸ್ಕೃತಿಕ ಅಂಶಗಳು

ವಡ್ಡಾರಾಧನೆಯ ಕಾಲದಲ್ಲಿ ಅರಸು ಮನೆತನಗಳಲ್ಲಿ ಅರಸುಕುಮಾರಿಗಾಗಿ ಸ್ವಯಂವರವನ್ನು ಏರ್ಪಡಿಸುವ ಪರಿಪಾಠ ಇತ್ತ. 'ಸನತ್ಕುಮಾರ ಚಕ್ರವರ್ತಿಯ ಕಥೆ'ಯಲ್ಲಿ ತನ್ನ ಅಣ್ಣನನ್ನು ಕೊಂದು ದುರಾತ್ಮನ ಮೇಲೆ ಸೇಡು ತೀರಿಸಿಕೊಳ್ಳಲು ಕುಮಾರನಿದ್ದ ಸ್ಥಳಕ್ಕೆ ಬಂದಾಗ ಸಂಧ್ಯಾವಳಿ ಅವನ ಸುಂದರವಾದ ರೂಪವನ್ನು ನೋಡಿ ಕಾಮಪರವಶಳಾಗಿ ಪ್ರೀತಿಯುಕ್ಕಿ ತನ್ನ ಭಯಂಕರವಾಗಿದ್ದ ರೂಪವನ್ನು ಬದಲಿಸಿ ಮೋಹದಿಂದ ವಿರಹ ಹೆಚ್ಚಾಗಿ ಕಂದಿಕುಂದಿ ಸುನಂದೆಯು ಒಳಗೆ ಬಂದು ಹೇಳುತ್ತಾಳೆ. ನೀನು ಕರುಣಿಸು ನನ್ನ ಸಹೋದರಿ ಸಮಾನ ನನ್ನ ಕಲ್ಯಾಣ ಮಾಡುವುದು ನಿನ್ನ ಜವಾಬ್ದಾರಿ ಕಾರಣ ಕುಮಾರನಿಗೆ ಈ ರೀತಿಯಾಗಿ ಹೇಳು ಇವಳು ವಿಜಯಾರ್ಧನೆಂಬ ಪರ್ವತದ ಆಶ್ರಮದಿಂದ ಪುರಾಧಿಪತಿಯಾದ ಅಶನಿವೇಗವೆಂಬ ವಿದ್ಯಾಧರನಿಗೂ ವಿದ್ಯುತ್ಪ್ರಭೆಯೆಂಬ ಅವನ ಹೆಂಡತಿಗೂ ಮಗಳು ಸಂಧ್ಯಾವಳಿ. ನೀವೇ ಶರಣು ಎಂದು ಇವಳು ಬಾವಿಸಿದ್ದಾಳೆ. ಈಕೆಯನ್ನು ನೀವು ಸ್ವೀಕರಿಸಬೇಕು. ಈ ರೀತಿಯಾಗಿ ಹೇಳಿಕೊಟ್ಟು ಸನತ್ಕುಮಾರನ ಬಳಿಗೆ ಕಳುಹಿಸಿಕೊಟ್ಟಳು. ಅವಳು ಕುಮಾರನಿಗೆ ಸಂಧ್ಯಾವಳಿ ಹೇಳಿ ಕೊಟ್ಟರೀತಿಯಲ್ಲಿ ಹೇಳಿದಾಗ, ಕುಮಾರನು ಅದಕ್ಕೆ ತಂದೆತಾಯಿ ಬಂದು ಕೊಡದ ಹೆಣ್ಣನ್ನು ಕೈಗೊಳ್ಳುವುದು ನನಗೆ ಅಯೋಗ್ಯವಾದದು, ಎಂದು ಹೇಳಲು. ಮಿತ್ರರು ಸಂಬಂಧಿಗಳು ನೀಡಿದರೆ ಸ್ವೀಕರಿಸಬಹುದು ಎಂದು ಆತನನ್ನು ಒಪ್ಪಿಸಿ, ದಿವ್ಯ ದೇವತೆಗಳೇ ಮಿತ್ರ ಬಂಧು ಜನರಾಗಿ ಬಂದು ಸಂಧ್ಯಾವಳಿಯನ್ನು ಮದುವೆ ಮಾಡಲು ಮುಂದೆ ಬಂದು ಮಹಾ ವೈಭವದಿಂದ ಪ್ರಾಣಿಗ್ರಹಣ ಪೂರ್ವಕವಾಗಿ ಸುನಂದೆ ಸಂದ್ಯಾವಳಿಯ ಮದುವೆ ಮಾಡಿಕೊಟ್ಟಳು. ಈ ರೀತಿಯಾಗಿ ಅವರು ಅನ್ಯೋನ್ಯವಾಗಿ ಗಾಂದರ್ವ ವಿವಾಹ ಮಾಡಿಕೊಂಡು ಸುಖವಾಗಿದ್ದರು. ಎಂಬುದು ಗಮನಿಸಿದಾಗ ಆಗಿನ ಕಾಲದಲ್ಲಿ ಗಾಂದರ್ವ ವಿವಾಹ ರೂಢಿಯಲ್ಲಿತ್ತು. ಎಂದು ಅಧ್ಯಯನದಿಂದ ತಿಳಿದು ಬರುವ ವಿಷಯವಾಗಿದೆ.

ಅಲ್ಲದೆ ಪಾಣಿಗ್ರಹಣ ಪುರಸ್ಕಾರವಾಗಿ ವಿವಾಹ ನಡೆಯುತ್ತಿತ್ತು. ಅಶನಿವೇಗನು ಮಗನು ಸತ್ತ ವೃತ್ತಾಂತವನ್ನು ಕೇಳಿ ಕುಪಿತನಾಗಿ ಸಮಸ್ತ ಸೈನ್ಯದೊಂದಿಗೆ ಕುಮಾರ ಮೇಲೆ ಯುದ್ಧಕ್ಕೆ ಬರಲು ಕುಮಾರನು ಒಂದು ಅರ್ಧ ಚಕ್ರ ಬಾಣದಿಂದ ಅವರೆಲ್ಲರನ್ನು ಸಂಹರಿಸಿದನು. ಅಲ್ಲದೆ

ಕೆಲವರು ಶರಣು ಬಂದರು. ಅವರಿಗೆಲ್ಲ ಅಭಯವನ್ನು ನೀಡಲಾಯಿತು. ಚಂದ್ರವೇಗನು ಮಹಾವೈಭವದಿಂದ ಕುಮಾರನನ್ನು ಕರೆದುಕೊಂಡು ಪಟ್ಟಣ ಪ್ರವೇಶಿಸಿ. ಒಳ್ಳೆಯ ದಿನ, ವಾರ, ನಕ್ಷತ್ರ ಹೋರಾ ಮುಹೂರ್ತ ಲಗ್ನದಲ್ಲಿ ಚಂದ್ರಮತಿ, ಚಂದ್ರಶ್ರೀ, ಚಂದ್ರಲೇಖ, ಶಶಿಕಾಂತೆ, ಮನೋಹಾರಿಣಿ, ಹರಿಕಾಂತೆ, ಕಮಲಮುಖಿ, ಪ್ರಿಯದರ್ಶಿನೆ ಮುಂತಾದ ತನ್ನ ನೂರ್ವರು ಕನ್ಯೆಯರನ್ನು ಪಾಣಿಗ್ರಹಣ ಪುರಸ್ಕರವಾಗಿ ಮದುವೆ ಮಾಡಿಕೊಟ್ಟನು. ಈ ರೀತಿಯಾಗಿ ದಿನ, ವಾರ, ನಕ್ಷತ್ರ, ಹೋರಾ ಮುಹೊರ್ತ, ಮುಂತಾದವುಗಳಿಗೆ ಮಹತ್ವಕೊಟ್ಟು ಲಗ್ನ ಕಾರ್ಯ ನಡೆಯುತ್ತಿತ್ತು. ಸಿರಿದಿಣ್ಣನು ಶುಕ್ಲಪಕ್ಷದ ಚಂದ್ರನ ಹಾಗೆ ಬೆಳದು ಯುವಕನಾದನು. ಸರ್ವಕಾಳಾಕುಶಲನಾದನು ಸಾಕೇತ ನಗರದ ರಾಜ ಸುಮಂತನು ಮಗಳು ಸುಮತಿಯ ಸ್ವಯಂವರ ಏರ್ಪಡಿಸಲಾಗಿತ್ತು. ಸುಮತಿ ಅಲ್ಲಿ ನೆರೆದ ಯಾವ ರಾಜ ಕುಮಾರನನ್ನು ಒಪ್ಪದೆ ಸಿರಿದಿಣ್ಣನಿಗೆ ಮಾಲೆ ಹಾಕಿದಳು ಅವರ ಮದುವೆ ನಡೆದು ಹೋಯಿತು. ಮದುವೆಯಾದ ಮೇಲೆ ತಂದೆ ಮಗಳು ಅನೇಕ ಕಾಣಿಕೆಗಳೊಂದಿಗೆ ಪತಿಯ ಮನೆಗೆ ಕಳುಹಿಸುತ್ತಿದ್ದನು 'ಸಿರಿದಿಣ್ಣ ಭಟಾರರ ಕಥೆ"ಯಲ್ಲಿ ಸುಮಂತರಾಜ ತನ್ನ ಮಗಳು ಸುಮತಿಯನ್ನು ಸಿರಿದಿಣ್ಣ ಅರಸು ಕುಮಾರನಿಗೆ ಮದುವೆ ಮಾಡಿಕೊಟ್ಟಾಗ ಅನೇಕ ಬಳುವಳಿಯನ್ನು ಕೊಟ್ಟನು ಎಂಬ ಉಲ್ಲೇಖವಿದೆ.

ಮದುವೆಯಂತೆ ಅನೇಕ ಸಂಸ್ಕಾರಗಳನ್ನು ಮಾಡುತ್ತಿದ್ದರು. "ಭದ್ರಬಾಹು ಭಟಾರರ ಕಥೆ"ಯಲ್ಲಿ ಈ ರೀತಿಯ ಉಲ್ಲೇಖವಿದೆ. ಪದ್ಮರಥನೆಂಬ ಅರಸನ ಪುರೋಹಿತನಾದ ಸೋಮಶರ್ಮನೆಂಬ ಬ್ರಾಹ್ಮಣ, ಅವನ ಹೆಂಡತಿ ಸೋಮಶ್ರೀ, ಇವರಿಗೆ ಒಬ್ಬ ಮಗನು ಹುಟ್ಟಿದನು, ತಂದೆ-ತಾಯಿ ಸಕಲ ಬಂಧುಬಾಂಧವರು ಉತ್ಸಾಹದಿಂದ ಹುಟ್ಟಿದ ಕೂಸಿಗೆ ಭದ್ರಬಾಹು ಎಂದು ಹೆಸರಿಟ್ಟರು. ಮಗು ಬಿದಿಗೆಯ ಚಂದ್ರನಂತೆ ಬೆಳೆದನು. ಮುಂಜಿ ಕಟ್ಟುವ ಪ್ರಾಯವಾಗಲು ಒಳ್ಳೆಯ ದಿನ, ವಾರ, ನಕ್ಷತ್ರ, ಸುಮೂಹೂರ್ತ ನೋಡಿ ಉಪನಯನ ಕಾರ್ಯಮಾಡಿದರೆಂಬ ಪ್ರಸ್ತಾಪವಿದೆ.

"ಮಧ್ಯಮವರ್ಗದ ಕುಟುಂಬಗಳಲ್ಲಿ ಅತಿಥಿಗೆ (ತಲೆಗೆ) ಎಣ್ಣೆ ಸ್ನಾನಕ್ಕೆ ಬಿಸಿನೀರು ಸುತ್ತಿಕೊಳ್ಳಲು ಒಲ್ಲಣಿಗೆ ಕೊಟ್ಟು ಆದರಿಸುವುದು"[(೩)] ಪ್ರಾಚೀನ ಕರ್ನಾಟಕದ ಸಾಂಸ್ಕೃತಿಕ ಅಂಶದ ಮೇಲೆ ಬೆಳಕು ಚಲ್ಲುತ್ತದೆ.

ಕಥೆಗಳ ಸರಣಿಯಲ್ಲಿ ಪ್ರಾಣಿಗಳ ಕಥೆಗಳು, ರಮ್ಯಕಥೆಗಳೂ, ವಿನೋದ ಕಥೆಗಳು, ಮೂರ್ಖ ಕಥೆಗಳು, ಬುದ್ಧಿವಂತಿಕೆಯ ಕಥೆಗಳು, ಕಿನ್ನರಕಥೆಗಳು, ಮುಂತಾದ ಕಥೆಗಳು ವೈವಿಧ್ಯಮಯವಾಗಿದೆ.

ಅರಸರಲ್ಲಿ ಸಿರಿವಂತರಲ್ಲಿ ಸಾಮಾನ್ಯವಾಗಿ ಬಹು ಪತ್ನಿತ್ವ ರೂಢಿಯಲ್ಲಿತ್ತು. 'ಗಜಕುಮಾರನ ಕಥೆ'ಯಲ್ಲಿ ಗಜಕುಮಾರನು ಆ ಪಟ್ಟಣದ ಪರದರು, ಪಾರ್ವರು, ಒಕ್ಕಲಿಗರು, ಸಾಮಂತರು, ಎಲ್ಲರ ಮನೆಯ ಒಳ್ಳೆಯ ಹೆಣ್ಣುಗಳಲ್ಲಿ ತನ್ನ ಕಣ್ಣಿಗೆ, ಮನಸ್ಸಿಗೆ ಬಂದವರನ್ನು ಅಲ್ಲದೆ ಆ ಊರಿನ ಅಕ್ಕಸಾಲೆ ಪಂಡಗಳೆ ಎನ್ನುವವನು ಅವನ ಹೆಂಡತಿ ವಸುಂಧರಿ ಎಂಬುವಳನ್ನು ಆಶೆಪಟ್ಟು ಅವಳನ್ನು ತನ್ನ ಮನೆಯಲ್ಲಿರಿಸಿಕೊಂಡು ಬಾಳಿದನು ಎಂಬ ಉಲ್ಲೇಖ ಇದೆ. ಅಲ್ಲದೆ 'ಚಿಲಾತಪುತ್ರನ ಕಥೆ'ಯಲ್ಲಿ ಪ್ರದ್ಯೋತವನ್ನು ಹಿಡಿದು ಕಟ್ಟಿ ತಂದು ರಾಜನಿಗೆ ಒಪ್ಪಿಸಿದಾಗ ಅರಸನು ನಿನಗೇನು ಬೇಕು ಹೇಳು ಎಂದು ಕೇಳಿದಾಗ ನನಗೆ ಬೇರೆ ಏನು ಬೇಡ ಮಹಾರಾಜಾ ಒಂದನ್ನು ಮಾತ್ರ ಕೇಳುತ್ತೇನೆ ಹನ್ನೆರಡು ವರ್ಷಗಳ ಕಾಲ ನಿಮ್ಮ ಅಂತಃಪುರದ ಹೆಣ್ಣುಗಳನ್ನು ಬಿಟ್ಟು ಈ ಉಳಿದ ಈ ಉರಿನ ನನಗೆ ಇಷ್ಟ ಬಂದ ಹೆಣ್ಣುಗಳೋಂದಿಗೆ ಮುಚ್ಚುಮರೆ ಇಲ್ಲದೆ ಬಾಳುತ್ತೇನೆಂದು ಅನುಮತಿ ಪಡೆದು. ಆ ಉರಿನ ಸಾಮಂತ ಮಹಾಸಾಮಂತ, ವರ್ತಕರ, ಬ್ರಾಹ್ಮಣರ ಹೆಂಡತಿರೊಂದಿಗೆ ಒಲಿಸಿಯಾ ಬಲಾತ್ಕಾರದಿಂದ ತನಗೆ ಇಷ್ಟ ಬಂದ ಹೆಣ್ಣುಗಳೊಂದಿಗೆ ಹನ್ನೆರಡು ವರ್ಷಗಳ ಕಾಲ ಬಾಳಿದನು ಎಂಬದು ಆ ಕಾಲದಲ್ಲಿ ಅರಸರಿಗಿದ್ದ ವಿಷಯಲಂಪಟ ಬದುಕು ವ್ಯಕ್ತವಾಗಿದೆ.

ಅಷ್ಟಾಹ್ನಿಕಮಹಿಮೆ – ಎಂಟು ದಿನಗಳವರೆಗೆ ಅರಸರು ಆಚರಿಸುವ ಮಹೋತ್ಸವದ ಉಲ್ಲೇಖ 'ಸಿರಿದಿಣ್ಣ ಭಟ್ಟಾರರ ಕಥೆ'ಯಲ್ಲಿದೆ. ಫಾಲ್ಗುಣ ನಂದೀಶ್ವರ ಉತ್ಸವವನ್ನು ಸಿಂಹರಥನೆಂಬ ಅರಸ, ಜಿತಶತ್ರು, ಸುಮಂತನೆಂಬ ಅರಸ. ಈ ಮೂವರು ಮಾಂಡಲಿಕರು ತಂತಮ್ಮ ಪಟ್ಟಣಗಳಲ್ಲಿ ಮಹಾವೈಭವದಿಂದ ಎಂಟು ದಿನಗಳ ಕಾಲತೀರ್ಥಂಕರ ಸೇವೆಗಳನ್ನು ಮಾಡಿದರು.

ಜೈನಶಾಸನ ದೇವತೆಯಾದ ಶ್ರೀಯಾದೇವತೆಯನ್ನು ಊರಲೊರಗಿನ ಎಲ್ಲ ಜೈನರು ಪೂಜಿಸುತ್ತಿದ್ದರು. "ಜೈನರು ಈ ಉತ್ಸವಗಳನ್ನು (ಹಬ್ಬ) ಫಾಲ್ಗುಣ ಶುದ್ಧ ೮ ರಿಂದ ಹುಣ್ಣಿಮೆಯ ವರೆಗೆ ಆಚರಿಸುತ್ತಿದ್ದರು. ಅಲ್ಲದೆ ವರಂಗಾಯಿ ಎಂಬ ಸ್ಥಾನಿಕ ದೇವತೆಯ ಜಾತ್ರೆಯನ್ನು ಆಚರಿಸುತ್ತಿದ್ದರು".[೪]

ಸಮಾಜದಲ್ಲಿ ಜೋಯಿಸ ಜ್ಯೋತಿಷ್ಯದ ಮೇಲೆ ಸಾಕಷ್ಟು ನಂಬಿಕೆ ಇಟ್ಟಿದ್ದರು. 'ಸುಕುಮಾರ ಸ್ವಾಮಿಯ ಕಥೆ'ಯಲ್ಲಿ ಸೂರ್ಯಮಿತ್ರನು ತನ್ನ ಗುರುಗಳ ಅತಿಮಾನಷ ಅವಧಿಜ್ಞಾನವನ್ನು ಜ್ಯೋತಿಷ್ಯವೆಂದು ಬಗೆದು ಅದನ್ನು ಆವರಿಂದ ಕಲಿಯಬೇಕೆಂಬ ಉದ್ದೇಶದಿಂದ ದೀಕ್ಷೆ ಪಡೆದನು ಎಂಬ ಉಲ್ಲೇಖವಿದೆ. ಕೆಲವು ಶ್ರಾವಕರು ಜ್ಯೋತಿಷಿಗಳಾಗಿದ್ದರು.

"ಅತಿಮಾನುಷ ಶಕ್ತಿಗಳ ಬೇತಾಳ ಮಾರಿಮರಣಗಳಂತೆ ಉಲ್ಲೇಖ ಸಾಮಾನ್ಯ ಜನರಲ್ಲಿ ಈ ರೀತಿಯ ನಂಬಿಕೆಗಳಿದ್ದವು. ಅತಿಮಾನುಷ ಶಕ್ತಿಗಳ ಜೊತೆಗೆ ಮಂತ್ರ ಮಾಟಗಳ ಬಳಕೆ ಮಾಯ ಮಂತ್ರಗಳ ಪ್ರಯೋಗ",[೫] ಈ ವಡ್ಡಾರಾಧನೆಯ ಕಥೆಗಳಲ್ಲಿದೆ.

ತನ್ನ ಕಿರಿಯ ಮಗಳಲ್ಲೇ ಕಾಮಾಸಕ್ತನಾಗಿ ತಾನೆ ಮದುವೆ ಮಾಡಿಕೊಂಡನೆಂಬ ನೀತಿಗೆಟ್ಟ ಜೀವನ ಕಾರ್ತಿಕ ಋಷಿಯ ಕತೆಯಲ್ಲಿ ವ್ಯಕ್ತವಾಗಿದೆ.

'ಸುಕುಮಾರ ಸ್ವಾಮಿಯ ಕಥೆ'ಯಲ್ಲಿ ನಾಗಸೊರೆನೆಂಬ ವರ್ತಕರು ಎಂಟು ಜನ ಹೆಂಡಿರನ್ನು ಪಡೆದರೂ ಅವರಲ್ಲಿ ಸಂತೋಷ ಪಡೆದೇ ಮೋದಾಳಿಯೊಂದಿಗೆ ರಹಸ್ಯವಾಗಿ ಬೆಳೆಸಿಕೊಂಡ ನೀತಿಬಾಹ್ಯ ಸಂಬಂಧ 'ವಿದ್ಯುಚ್ಚೋರ ರಿಸಿಯ ಕಥೆ'ಯಲ್ಲಿ ವಿದ್ಯುಚ್ಚೋರನೆಂಬ ಕಳ್ಳ ಜ್ರಂಭಿನಿ, ಸಂಭಿನಿ, ಮೋಹಿನಿ, ಸರ್ಷಪಿ, ತಾಳೋದ್ಘಾಟನಿ, ವಿದ್ಯಾಮಂತ್ರ ಚೂರ್ಣ ಯೋಗ, ಘಟಿಕಾಂಜನ ಮೊದಲಾದ ತಸ್ಕರ ಶಾಸ್ತ್ರ ಕಲಿತು ರಾತ್ರಿ ಹೊತ್ತು ನಗರದಲ್ಲಿ ಚಿನ್ನ ಆಭರಣಗಳನ್ನು ಕದ್ದು ಬಿಚ್ಚಿಟ್ಟು ತನ್ನ ವೇಷ ಬದಲಿಸಿ ಸ್ವಾಭಾವಿಕ ರೂಪ ಧರಿಸಿ ಊರಿನ ಸೂಳೆಗೆರೆಗಳಲ್ಲಿ ತನಗೆ ಇಷ್ಟ ಬಂದ ಹೆಣ್ಣುಗಳ ಜೊತೆ ಸುಖಿಸುತ್ತಾ ಇದ್ದನು. ಇಂಥಹ ಉಲ್ಲೇಖಗಳು ಆಗ ವೇಶ್ಯಾ ಪದ್ಧತಿ, ಗಣಿಕಾ ಪದ್ಧತಿಗಳು ಪ್ರಚಲಿತ ವಿದ್ಧವೆಂದು ಸೂಚಿಸುತ್ತವೆ.

ಕಳ್ಳರ – ಕಳ್ಳರ್ ವ್ಯಾಪರಸ್ಥರನ್ನು ಸುಲಿದು ಅವರ ವಸ್ತುಗಳನ್ನು ದೋಚುವುದು. ಮನೆಮನೆಗೂ ಕನ್ನ ಹಾಕಿ ಹಣ ಒಡವೆಗಳನ್ನು ಅಪಹರಿಸುವುದು. ಕೆಲವೊಂದು ಸಂದರ್ಭದಲ್ಲಿ ವ್ಯಾಪಾರಸ್ಥರು ಒಕ್ಕಲಿಗರು ತಂದ ಬತ್ತ ಕೊಳ್ಳುವಾಗ ಬಳ್ಳದಿಂದ ಅಳೆಯುವುದರಲ್ಲಿ ಮೋಸ ಮಾಡುತ್ತಿದ್ದರು. ಜೂಜು, ಮದ್ಯಗಳ ವ್ಯಸನಗಳು ಉಲ್ಲೇಖ ಇವೆ. ಇವು ಅಂದಿನ ಸಮಾಜದಲ್ಲಿರುವ ದುರ್ನಡತೆ, ದುಶ್ಚಟಗಳನ್ನು ಸೂಚಿಸುತ್ತವೆ.

'ವಡ್ಡಾರಾಧನೆ'ಯ ಪ್ರತಿಯೊಂದು ಕತೆಯೂ ಒಂದಲ್ಲ ಒಂದು ವಿಧದಲ್ಲಿ ಸಾಂಸ್ಕೃತಿಕ ಸಾರವನ್ನು ಪ್ರತಿಬಿಂಬಿಸುತ್ತದೆ. ಸತ್ತವನನ್ನು ಮಂತ್ರಹಾಕಿ ಬದುಕಿಸುವುದು, ಹೆಣವನ್ನು ಕಾದು ಕುಳಿತ ಕಳ್ಳರು ಕುರಿಯನ್ನು ಕದ್ದು ತಂದು ತಿನ್ನುವುದು, ಸುಧಾಮೆಯ ಕಥೆಯಲ್ಲಿ ಹೆಣ್ಣೊಬ್ಬಳು ಕೊಟ್ಟ ಮಾತನ್ನು ಉಳಿಸಿಕೊಳ್ಳಲು ಹಲವರಿಗೆ ಭಾಷೆಕೊಟ್ಟು ಅಷ್ಟು ಜನರ ಮೆಚ್ಚುಗೆಗೆ ಪಾತ್ರಳಾಗಿ ಸತ್ಯತನವನ್ನು ತೋರಿಸುವುದು, ಮಕ್ಕಳಾಗದಿರುವ ಹೆಂಗಸರು ಮಕ್ಕಳಿಗಾಗಿ ಹಂಬಲಿಸಿ ನಾಗಾಲಯಕ್ಕೆ ಹಲವು ದೇವರಿಗೆ ಮೊರೆ ಇಟ್ಟು ಪೂಜಿಸುವುದು, ವ್ಯಾಪಾರಕ್ಕೆಂದು ವರ್ತಕರು ದೂರದ ಊರಿಗೆ ಹೋಗುವುದು ಅಲ್ಲದೇ, 'ಸಿರಿದಿಣ್ಣ ಭಟಾರರ ಕಥೆ'ಯಲ್ಲಿ ರಾಜ – ರಾಣಿಯರು ಚದುರಂಗ ವಾಡುತ್ತಿರುವಾಗ ಗಿಣಿಯು ಆಟಕ್ಕೆ ಸಾಕ್ಷಿಯಾಗಿ ಕೊಕ್ಕಿನಿಂದ ಗೆರೆ ಎಳೆಯುವುದು, ಗಂಡನಿಗೆಂದು ಹೊಲದ ಬಳಿಗೆ ಊಟವನ್ನು ತೆಗೆದುಕೊಂಡ ಹೋದ ಪಕ್ಷಿ

ಗಂಡನನ್ನು ಕಾಣದೆ ಬಂದಾಗ, ಮನೆಗೆ ಮರಳಿಬಂದ ಗಂಡ, ಅವಳನ್ನು ದಂಡಿಸುವ ರೀತಿ ಉಲ್ಲೇಖವಾಗಿದೆ.

"ಗೊಲ್ಲಗೇರಿಯ ಅರಣ್ಯವಾಸಿಗಳಾದ ಜನ ರೈತರು ಕಾಡನ್ನು ಕಡಿದು ವ್ಯವಸಾಯ ಮಾಡುತ್ತಿದ್ದ ಪದ್ಧತಿ, ಮಳ್ಳೆಯ ಹೊರೆಗಳನ್ನು ಹೊತ್ತ ಬಡವರು ಜೀವನ ಮಾಡುತ್ತಿದ್ದ ರೀತಿ ಹಸುಬೆಯ ಚೀಲದಲ್ಲಿ ಮದ್ದನ್ನು ತುಂಬಿಕೊಂಡು ಬರುವ ಜಾನಪದ ವೈದ್ಯರು, ಇಂದ್ರ ಜಾಲಿಗರ ವಸ್ತುಗಳು ಬೊಂಬೆಗಳು ಮತ್ತು ಮುಖವಾಡಗಳ ಈ ಮುಂತಾದ ವಿವರಗಳು 'ವಡ್ಡಾರಾಧನೆ'ಯಲ್ಲಿ ಸಾಂಸ್ಕೃತಿಕ ಪರಿಸರವು ಅಂದಿನ ಜನಸಾಮಾನ್ಯರ ಬೆಡಗು, ಜಾನಪದ ವೈದ್ಯ ಪದ್ಧತಿ ಸ್ಥಳೀಯ ಸತ್ವವನ್ನು ನೆಲದ ಗುಣವನ್ನು ತೋರಿಸಿಕೊಡುತ್ತದೆ".[೬]

ಒಟ್ಟಿನಲ್ಲಿ ಈ ಕಥೆಗಳಲ್ಲಿ ಪ್ರತಿಬಿಂಬತವಾಗಿರುವ ಅಂದಿನ ಸಮಾಜದಲ್ಲಿರುವ ಜನರ ಸಾಂಸ್ಕೃತಿಕ ಜೀವನ ಸಂಪದ್ಭರಿತವಾಗಿದ್ದು, ಸಾಮಾನ್ಯವಾಗಿ ಜನರು ಧಾರ್ಮಿಕ ಮತ್ತು ನೀತಿಯುಕ್ತ ಜೀವನ ನಡೆಸುತ್ತಿದ್ದರು, ಎಂಬ ಉಲ್ಲೇಖಗಳು ಇವೆ. ಅರಸ-ಅರಸಿ, ವ್ಯಾಪಾರಸ್ಥರಾದಿ ಜನರನ್ನು ಧಾರ್ಮಿಕ ಮತ್ತು ನೀತಿಯುಕ್ತವಾದ ಬದುಕನ್ನು ಬಾಳಲು ಸಹಾಯ ಮಾಡಿವೆ. ಸಾಂಸ್ಕೃತಿಕ ಪರಿಸರವು, ವೈಭವವು, ಸಂಪತದ್ಭರಿತವಾದ ಸಾಂಪ್ರದಾಯ ಆಚಾರ-ವಿಚಾರ ರೀತಿ- ನೀತಿ ಉತ್ತಮವಾಗಿತ್ತು ಎಂಬುದು ತಿಳಿದುಬರುತ್ತದೆ.

### ೩.೩. ಆರ್ಥಿಕ ಸ್ಥಿತಿಗತಿ

ವಡ್ಡಾರಾಧನೆಯ ಕಾಲದಲ್ಲಿ ಬೇಸಾಯ ಅಥವಾ ಒಕ್ಕಲುತನ ಪ್ರಮುಖ ಉದ್ಯೋಗವಾಗಿತ್ತು. ಬತ್ತ ಆ ಕಾಲದ (ಪ್ರದೇಶದ) ಪ್ರಮುಖ ಬೆಳೆಯಾಗಿತ್ತು. ಈ ಧಾನ್ಯವನ್ನೇ ಒಕ್ಕಲಿಗರು ಅಥವಾ ಉತ್ಪಾದಕರು, ವ್ಯಾಪರಸ್ಥರು ಸಮೀಪದ ಪೇಟೆಯಲ್ಲಿ ಮಾರಲು ಹೋಗುತ್ತಿದ್ದರು. ಕಬ್ಬನ್ನು ಕೂಡಾ ಬೆಳೆಯುತ್ತಿದ್ದರು. ತುಯ್ಯಲ್ ಅಕ್ಕಿಯ ಬೀರು (ಅಕ್ಕಿ - ಹಾಲು ಮತ್ತು ಸಕ್ಕರೆಗಳಿಂದ ಮಾಡಿದ ಪಕ್ವಾನ್ನ) ಅನೇಕ ಬಾರಿ ಈ ಕಥೆಗಳಲ್ಲಿ ಬರುತ್ತದೆ. "ಸುಕುಮಾರ ಸ್ವಾಮಿಯ ಕಥೆ"ಯಲ್ಲಿ ವೈನಾಕನ ಕಥೆಯಲ್ಲಿ ಧರ್ಮಪುರವೆಂಬ ಪಟ್ಟಣದಲ್ಲಿ ನಾಗದತ್ತನೆಂಬ ಶೆಟ್ಟಿಯ ಬಂಟ ವೈನಾಕನೆಂಬುವನು, ಒಂದು ದಿನ ಕಬ್ಬಿನ ಗದ್ದೆಯನ್ನು ಉಳುವಾಗ ಎಂಬು ಮಾತು. ಆಗಿನ ಕಾಲದ ಕಬ್ಬನ್ನು ಬೆಳೆಯುತ್ತಿದ್ದರೆಂಬುದು ಉಲ್ಲೇಖಿತವಾಗಿದೆ.

ಆಗ ರಾಜಶ್ರೇಷ್ಠಿ ಅರಸನಿಗಾಗಿ ವ್ಯಾಪರ – ವ್ಯವಹಾರಗಳನ್ನು ನೋಡಿಕೊಳ್ಳುವ ಅಧಿಕಾರಿಯಾಗಿದ್ದನು. ರಾಜ ಶ್ರೇಷ್ಟಿಯ ಹೊರತಾಗಿ ಅನೇಕ ಪ್ರಕಾರದ ವ್ಯಾಪಾರಗಳ ಉಲ್ಲೇಖ ಈ ಕಥೆಗಳಲ್ಲಿ ಬರುತ್ತದೆ. "ಶೆಟ್ಟಿ ಪರದ, ಸಾರ್ಥಧಿಪತಿ – ಚಕ್ಕಡಿ – ಒಂಟೆ ಇತ್ಯಾದಿಗಳ

ಮುಖಾಂತರ ಮಾಲು ಸಾಗಿಸುವ ಉಲ್ಲೇಖಗಳಿವೆ. ಬಟ್ಟೆಯ ವ್ಯಾಪಾರಸ್ಥರಿಗೆ ದೂಸಿಗರ್ – ಎಂದೆನ್ನುತ್ತಿದ್ದರು".(2) ಆಕಾಲದಲ್ಲಿ ಸಿರಿವಂತರ ಮನೆಗೆ ಹೋಗಿ ರತ್ನಗಂಬಳಿಗಳನ್ನು ಮಾರುವ ವ್ಯಾಪಾರಸ್ಥರೂ ಇದ್ದರು.

'ಸುಕುಮಾರ ಸ್ವಾಮಿಯ ಕಥೆ'ಯಲ್ಲಿ ಸುಕುಮಾರ ಸ್ವಾಮಿ ಬೆಳೆದು ಯುವಕನಾದಾಗ ಒಂದು ದಿನ ಒಬ್ಬ ನೈಮಿತ್ತಿಕನು ಬಂದು ಸುಕುಮಾರನು ಎಂದು ಋಷಿಯ ರೂಪವನ್ನು ಕಾಣುತ್ತಾನೋ ಅಂದು ವಿರಕ್ತನಾಗಿ ತಪಸ್ಸಿಗೆ ಹೋರಟುಹೋಗುತ್ತಾನೆ ಎಂದು ನುಡಿದನು. ಇದನ್ನು ಕೇಳಿದ ತಾಯಿಗೆ ಆತಂಕವಾಗಿ ತನ್ನ ಮನೆಗೆ ಋಷಿಗಳು ಕಾಲಿಡದ ಹಾಗೆ ಕಾವಲವನ್ನು ಇರಿಸಿ ಎಚ್ಚರಿಕೆ ವಹಿಸಿದಾಗ ಒಂದು ದಿನ ರತ್ನದ್ವೀಪದಿಂದ ಒಬ್ಬ ವರ್ತಕನು ಲಕ್ಷದಿನಾರಗಳ ಬೆಲೆ ಬಾಳುವ ರತ್ನಗಂಬಳಿಗಳನ್ನು ಮಾರಲು ತಂದನು. ಆ ಊರಿನವರಾದ ವೃಷಭಾಂಕನು ತನ್ನ ಮಡದಿ ಜ್ಯೋತಿರ್ಮತಿಗೆ ಅವುಗಳನ್ನು ತೆಗೆದುಕೊಳ್ಳುವುದಕ್ಕಾಗಿ ಬೆಲೆಯನ್ನು ವಿಚಾರಿಸಿದನು. ಅವುಗಳಿಗೆ ಒಂದು ಲಕ್ಷದಿನಾರ (ಚಿನ್ನದ ನಾಣ್ಯ) ಬೆಲೆ ಎಂದು ವರ್ತಕನು ಹೇಳಲು, ಅರಸನು ಕೊಂಡು ಕೊಳ್ಳಲಾರದೆ ಹೊರಟು ಹೋಗಲು ವರ್ತಕನು ಊರೆಲ್ಲಾ ಅಲೆದರೂ ಅಷ್ಟು ಬೆಲೆಯ ರತ್ನಗಂಬಳಿಗಳನ್ನು ಯಾರೂ ಕೊಳ್ಳದೆ ಹೋದರು. ವರ್ತಕನು ಅವನ್ನು ತಂದು ಯಶೋಭದ್ರಗೆ ತೋರಿಸಲು ಅವಳು ಲಕ್ಷ ದಿನಾರಗಳನ್ನು ಕೊಟ್ಟು ಅವುಗಳನ್ನು ಕೊಂಡು ಕೊಂಡಳು ಎಂಬ ಉಲ್ಲೇಖವಾಗಿರುವುದು.

ಇದರಿಂದಾಗಿ ವ್ಯಾಪಾರಸ್ಥರು ಅಷ್ಟೊಂದು ಬಂಡವಾಳ ಹೂಡಿ ರತ್ನಗಂಬಳಿ ತಯಾರಿಸುವುದು, ಜೊತೆಗೆ ಚಿನ್ನದ ನಾಣ್ಯಗಳ ಬಳಕೆ ಇತ್ತೇಂಬುದು ಗೊತ್ತಾಗುತ್ತದೆ. ಮತ್ತು ಇದೇ ಕಥೆಯಲ್ಲಿ ಯಶೋಭದ್ರೆ ಅರಸ ಬರುವ ದಾರಿಯಲ್ಲಿ ಪಂಚರತ್ನಗಳಿಂದ ರಂಗವಲ್ಲಿ ಹಾಕಿಸಿ ಹಲವು ಬಗೆಯ ರೇಷ್ಮೆ ವಸ್ತುಗಳನ್ನು ಹಾಯಿಸಿ. ಚಿನ್ನ, ರತ್ನ ಮುತ್ತುಗಳ ತೋರಣ ಕಟ್ಟಿಸಿ ಅರಸನ ಬರುವಿಕೆ ಕಾಯಿತ್ತಿದ್ದಳು ಎಂಬುದನ್ನು ಗಮನಿಸಿದರೆ ಆಗಿನ ಕಾಲದ ರಾಜ ವೈಭವ, ರೇಷ್ಮವಸ್ತು, ಚಿನ್ನ, ಮುತ್ತು, ರತ್ನಗಳ ಬಳಕೆ ಸಾಕಾಷ್ಟಿತ್ತೆಂಬುದು ತಿಳಿದು ಬರುತ್ತದೆ.

'ಅಣ್ಣಿಕಾಪುತ್ರನ ಕಥೆ'ಯಲ್ಲಿ ಒಂದು ದಿನ ಧನದೇವನು ವ್ಯಾಪಾರಕ್ಕೆಂದು ಅಮೂಲ್ಯವಾದ ಸರಕುಗಳನ್ನು ತುಂಬಿಕೊಂಡು ದಕ್ಷಿಣ ಮಧುರೆಗೆ ಹೋದನು. ಕೆಲವು ದಿನ ಅದೇ ಉರಿನಲ್ಲಿದ್ದು ಧನದೇವನು ತಾನೂ ತಂದಿದ್ದ ಸರಕವನ್ನೆಲ್ಲವನ್ನು ಮಾರಿ, ತನ್ನನಾಡಿಗೆ ಅಪೂರ್ವವಾಗಿದ್ದ ಹಲವು ವಸ್ತುಗಳನ್ನು ತಂಬಿಕೊಂಡು ತನ್ನ ಪಟ್ಟಣವಾದ ಉತ್ತರ ಮಧುರೆಗೆ ಬಂದನು ಎಂಬ ಉಲ್ಲೇಖದಿಂದಾಗಿ ವ್ಯಾಪಾರವು ಉತ್ತರ ಮಧುರೆಯಿಂದ ದಕ್ಷಿಣ ಮಧುರೆಯ ವರೆಗೂ ನಡೆಯುತಿತ್ತೆಂಬುದು ಅರಿವಾಗುತ್ತದೆ.

ಕೆಲವು ವ್ಯಾಪಾರಿಗಳು ಉರಲ್ಲಿ ತಮ್ಮ ಅಂಗಡಿಗಳನ್ನು ನಡೆಸುತ್ತಿದ್ದರು, ಕೆಲವು ಒಕ್ಕಲಿಗರು ಧಾನ್ಯವನ್ನು ತಂದು ಮಾರುತ್ತಿದ್ದರು, ಕೆಲವರು ಅದನ್ನು ಕೊಳ್ಳುತ್ತಿದ್ದರು ಧಾನ್ಯವನ್ನು ಸಾಮಾನ್ಯವಾಗಿ ಬಳ್ಳದಿಂದ ಅಳೆದು ಕಂಡಗ ಖಂಡಗ ದೊಡ್ಡ ಪ್ರಮಾಣದಲ್ಲಿ ಲೆಕ್ಕ ಮಾಡುತ್ತಿದ್ದರು. ಮತ್ತೊಂದು ದೊಡ್ಡ ಪ್ರಮಾಣದ ಅಳತೆ ಎಂದರೆ ಪೇರು-ಹೇರು (ಒಂದು ಚಕ್ಕಡಿ ತುಂಬ) ಆಗಿತ್ತು ಕೆಲವು ವ್ಯಾಪಾರಿಗಳು ಪಳ್ತಿ-ಹತ್ತಿಯನ್ನು ಮತ್ತು ಧಾನ್ಯವನ್ನು ಬಂಡಿಗಳಲ್ಲಿ ಸಾಗಿಸುತ್ತಿದ್ದರು.

ಬಡಕುಟುಂಬ ಕೆಲವು ಸ್ತ್ರೀಯರು, ದಾದಿ, ತೋಳ್ತು-ತೊತ್ತು, ಅಡುವ, ವಡ್ಡಿಸುವ, ಬೆಸಗಯ್ದ- ಪೆಂಡಿರ್ ಅಡಿಗೆ ಮಾಡುವ ಬಡಿಸುವ ಇತರ ಸೇವೆ ಮಾಡುವ ಹೆಣ್ಣಾಳುಗಳು ಸಿರಿಮಂತರ ಮನೆಯಲ್ಲಿ ಕಂಡು ಬರುತ್ತಿದ್ದರು.

ಸುಕೌಶಳ ಸ್ವಾಮಿಯ ಕಥೆಯಲ್ಲಿ ಸುಕೌಶಳ ಸ್ವಾಮಿಯ ವೈಭವವೂ ಅತ್ಯದ್ಭುತ. ಅವನಿಗೆ ಮೊಲೆಯೊಡಳು ಒಬ್ಬಳು ದಾದಿ ಸುವ್ರತೆ, ಸುಮತಿ ಎಂಬ ದಾದಿ ಊಟ ಮಾಡಿಸುವಳು, ನಂದೆ ಆಟಮಾಡಿಸುವಳು, ಸುಪ್ರಭೆ ಮಜ್ಜನ ಮಾಡಿಸಲು, ಮೇಘಮಾಲೆ ಅಲಂಕಾರ ಮಾಡಿಸಲು, ಈ ಐದು ಜನ ದಾದಿಯರ ಲಾಲನೆಯಿಂದ ಸುಕೌಶಳ ಸ್ವಾಮಿ ಸುಖವಾಗಿ ಬೆಳೆದು ಹದಿನಾರು ವರ್ಷದ ಯುವಕನಾದನು ಎಂಬ ಉಲ್ಲೇಖದಿಂದ ದಾದಿಯರು ಆ ಕಾಲದಿಂದ ಸೇವಕಿಯರು ಆಗಿದ್ದರೇಂಬುದು ಆಧ್ಯಯನದಿಂದ, ಇದ್ದರೆಂಬುದು ತಿಳಿಯುವುದಾಗಿದೆ.

"ಬೆಜ್ಜ-ವೈದ್ಯ, ಏರಣಿಗ, ಅಕ್ಕಸಾಲಿಗ, ಮೀಂಗುಲಿಗ–ಮೀನುಗಾರ ಬೆಸದ–ಅಂಬಿಗ, ಮೀನುಗಾರ-ಅಂಬಿಗ, ಮೋದಂಗಾರ–ಕಟ್ಟಿಗೆ ಕಡಿಯುವವ. ಬಡಗಿ-ಬಡಿಗ ಸಾಲಿಗಾರ ಬಿರ್ದಿ-ಬೇಡರ ಮುದುಕಿ, ಚಿತ್ತಾರಿಗಾರ್–ಚಿತ್ರಗಾರರು, ಮಾಲೆಗಾರ, ಜೋಯಿಸ್–ಜ್ಯೋತಿಷಿ, ಮಂತ್ರವಾದಿ ಇಂದ್ರಜಾಲಿಗ ಲಂಗಿಗರ ಡೊಂಬರು, ಪಗಣಿಗರ್ ಹಾಸ್ಯಗಾರರು, ಮಾದೆಗರ್ ಕಳ್ಳರ್ ಸೂಳೆಯರ್ ಇತ್ಯಾದಿ".[೮] ದೇಶಿ ಪದಗಳಲ್ಲಿನ ಈ ಉಲ್ಲೇಖಗಳು ಆಯಾ ಉದ್ಯೋಗ ಅಥವಾ ಕಸುಬಿನ ಅಥವಾ ಕಸಬುದಾರನ ಪ್ರಾದೇಶಿಕತೆಯನ್ನು ಸೂಚಿಸುತ್ತದೆ.

ಸಾಮಾನ್ಯವಾಗಿ ಕೆಲವೊಂದು ಸಂದರ್ಭದಲ್ಲಿ ವ್ಯಾಪಾರಿಗಳನ್ನು ದಾರಿಯಲ್ಲಿ ಕಳ್ಳರು ಸುಲಿಯುತ್ತಿದ್ದರು. ಒಂದೊಂದು ಬಾರಿ ಅವರನ್ನು ಇರಿದು ಅವರಲ್ಲಿರುವ ವಸ್ತುಗಳನ್ನು ದೋಚಿಕೊಂಡು ಹೋಗುತ್ತಿದ್ದರು.

ಕಾಷ್ಟಕೂಟನಂಥ ಬಡ ಕುಟುಂಬದವರು ಉರುವಲು ಕಟ್ಟಿಗೆ ಕೂಡಹಾಕಿ ಮಾರಿ ಹೊಟ್ಟೆತುಂಬಿಕೊಳ್ಳುತ್ತಿದ್ದರು. ಎಂಬುದು 'ಭದ್ರಬಾಹು ಭಟಾರರ ಕಥೆ'ಯಲ್ಲಿ ಕಾಷ್ಟಕೂಟ ಮತ್ತು ನಂದಿಮಿತ್ರ ಇಬ್ಬರು ಸೇರಿ ಕಟ್ಟಿಗೆ ಹೊರೆ ಮಾರುತ್ತಿದ್ದರು. ನಂದಿಮಿತ್ರ ತಂದ ಕಟ್ಟಿಗೆಯ ಭಾರೀ ಹೊರೆಗಳನ್ನು ಮಾರಿ ಕಾಷ್ಟಕೂಟ ದೊಡ್ಡ ಹಣವಂತನಾದನು. ನಂದಿಮಿತ್ರನಂಥ ಕಟ್ಟಾಳುಗಳೂ

ಇದ್ದರೂ, ಹೊಲದಲ್ಲಿ ಕೆಲಸ ಮಾಡುವ ವೈನಾಕನಂಥ ಕೂಲಿಯವರು, ಇದ್ದು ಇವರನ್ನು ಬಂಟನೆಂದು ಕರೆಯುತ್ತಿದ್ದರು.

'ಭದ್ರಬಾಹು ಭಟಾರರ ಕಥೆ'ಯಲ್ಲಿ, ಉಪಕಥೆಯಾದ ಪರಾಳಕೂಟ ಎಂಬ ಉರಲ್ಲಿ ದೇವಿಲನೆಂಬ ಒಬ್ಬ ಸರಕು ಸಾಗಾಣಿಕ ವರ್ತಕನಿದ್ದನು. ಒಂದು ದಿನ ದೇವಿಲನು ಇತರ ಅನೇಕ ವರ್ತಕರೊಂದಿಗೆ ಬಂಡಿಗಳಲ್ಲಿ ಹತ್ತಿಯನ್ನು, ಧಾನ್ಯವನ್ನು ತುಂಬಿಕೊಂಡು ಮಾರಾಟ ಮಾಡಬೇಕೆಂದು ಪಟ್ಟಣಕ್ಕೆ ಹೋಗುತ್ತಿರುವಾಗ ದಾರಿಯಲ್ಲಿ ಕಳ್ಳರು ಅಡ್ಡಗಟ್ಟಿ ಅವನನ್ನು ಅನೇಕ ವರ್ತಕರನ್ನು ಕೊಂದರು. ಉಳಿದವರೂ ಸತ್ತೇವೂ! ಕೆಟ್ಟೆವೂ! ಎಂದು ಓಡಿಹೋಗಿ ಬದುಕಿದರು. ಎಲ್ಲಾ ಸರಕುಗಳನ್ನು ಎತ್ತುಗಳನ್ನು ಕಳ್ಳರು ದೂಚಿ ಹೊರಟು ಹೋದರು.

'ಗುರುದತ್ತ ಭಟಾರರ ಕಥೆ'ಯಲ್ಲಿ ಸೊಪ್ಪುನಾರಾಗಿ ಬಡಿಯ ಈ ವಾಕ್ಯಕಾರದ ಬಳಕೆ ಆಗ ಪುಂಡಿಯನ್ನು ಬೆಳೆಯುತ್ತಿದ್ದರೆ ಎಂಬುದನ್ನು ಸೂಚಿಸುತ್ತದೆ. ಅದರೆ ಅವರೆಯನ್ನು ಇಂದಿನಂತೆ ಪಲ್ಯದಂತೆ ಬಳಸುತ್ತಿದ್ದರು. ಆಗಿನ ಕಾಲದಲ್ಲಿ ಪಸವ-ಬರ ಜನರನ್ನು ಕಾಡುತ್ತಿತ್ತು.

ಸಾಮನ್ಯವಾಗಿ ಮದ್ಯಮ ವರ್ಗದ ಮತ್ತು ಬಡಜನರು ಅಕ್ಕಿಯ ಅನ್ನವು ಮುಖ್ಯ ಆಹಾರವಾಗಿತ್ತು. ರಾಜಾನ್ನದ ಉಚ್ಚತರ ಅಕ್ಕಿಯ ಅನ್ನ ಅರಸರ ಮತ್ತು ಸಿರಿವಂತರ ಮುಖ್ಯ ಆಹಾರವಾಗಿತ್ತು, ಸುಮಾಸನೆಯ ಅಕ್ಕಿಗಳ ಉಲ್ಲೇಖವಿದೆ. ತುಯ್ಯಲ್ – ಅಕ್ಕಿ ಹಾಲು ಮತ್ತು ಸಕ್ಕರೆಗಳಿಂದ ಮಾಡಿದ ಸಿಹಿ ಪದಾರ್ಥ ಬಲು ಜನಪ್ರಿಯಗಳಾಗಿದ್ದವು.

ವಿಶೇಷ ಸಂದರ್ಭಗಳಲ್ಲಿ ಲಡ್ಡುಗೆ ಮತ್ತು ಮಂಡಗೆ ಬಲು ಸೇರಿಕೆಯ ತಿಂಡಿ ತಿನಿಸುಗಳಾಗಿದ್ದವು. "ಸುಕುಮಾರ ಸ್ವಾಮಿಯ ಕಥೆ" ಯಲ್ಲಿ ಉಪಕಥೆಯಾದ ಗಂಭೀರೆಯ ಕಥೆಯಲ್ಲಿ, ಗಂಭೀರ ಎಂಬ ಮುದುಕಿಯ ಮಗಳು ಹರಿಣಿ ಗರ್ಭಿಣಿಯಾದಳು, ಕಡಬು ತಿನ್ನಬೇಕೆಂದು ಅವಳಿಗೆ ಬಯಕೆಯಾಯಿತು. ಗಂಭೀರೆ ಮಗಳಿಗಾಗಿ ಹಲವು ಲಡ್ಡುಗೆ ಮಂಡಿಗೆ ಮುಂತಾದ ಭಕ್ಷ್ಯಗಳನ್ನು ಮಾಡಿಕೊಂಡು ಮಗಳ ಮನೆಗೆ ಹೋದಳು. ಅಲ್ಲದೆ 'ಚಿಲಾತ ಪುತ್ರನ ಕಥೆ'ಯಲ್ಲಿ ಸೆಟ್ಟಿನಂದಿ ಮಿತ್ರನು ವ್ಯಾಪಾರಕ್ಕಾಗಿ ಹೋಗಿದ್ದಾಗ, ಮದ್ಯೆ ಒಂದು ಊರಿನಲ್ಲಿ ತಂಗಿದ್ದನು. ಆಗ ತಪೋವರರೆಂಬ ಋಷಿಯರು ಬಿಕ್ಷೆಗಾಗಿ ಉರಲ್ಲಿ ಹೊರಟಾಗ ಅವರನ್ನು ನಿಲ್ಲಿಸಿ ಎಳ್ಳುಂಡೆಯನ್ನು ಉಣಬಡಿಸಿದನು ಎಂಬ ಉಲ್ಲೇಖದಿಂದಲೂ 'ಭದ್ರಬಹು ಭಟಾರರ ಕಥೆ'ಯಲ್ಲಿ ಬ್ರಹ್ಮಯ್ಯನಿಗೆ ಮಹಾರಾಣಿ ವಿಧವಿಧವಾದ ಭಕ್ಷ್ಯ ಭೋಜನಗಳನ್ನು ಬಡಿಸಿದಳು, ರಾಜನ್ನದ ಕೊಳ್-ಅನ್ನ ಬೆಣ್ಣೆ ಕಾಸಿದ ಪರಿಮಳ ಬೀರುವ ತುಪ್ಪ ಹಲವು ತರಹದ ಕಾಯಿಪಲ್ಯ, ಪಾಯಸ, ಪೂರಿ, ಇಡ್ಡಲಿ, ಸೊಂದಿಗೆ, ಲಾವಣಿಗೆ, ಘತಪೂರ, ಲಡ್ಡುಗೆ, ಮಂಡಿಗೆ ಮೊದಲಾದ ಹದಿನೆಂಟು ಬಗೆಯ ಭಕ್ಷ್ಯಗಳ ನಾನಾ ತರೆನಾದ ಪಾನೀಯಗಳು, ಮುಖ ಶುದ್ಧತೆಗಾಗಿ ಕರ್ಪೂರ ಮಿಶ್ರಿತವಾದ ತಾಂಬೂಲವನ್ನು ಬ್ರಹ್ಮಯ್ಯನಿಕೊಟ್ಟಳು.

ಅಲ್ಲದೆ ಬಡವರು ಅಕ್ಕಿಯ ಗಂಜಿ ಇವುಗಳ ಮೇಲೆ ಜೀವಿಸುತ್ತಿದ್ದರು ಎಂದು ಉಲ್ಲೇಖಿತವಾಗಿದೆ. ಈ ರೀತಿಯಾಗಿ ವಡ್ಡಾರಾಧನೆಯ ಕಥೆಗಳನ್ನು ಅಧ್ಯಯನ ಮಾಡಿದಾಗ ಸಾಮಾನ್ಯವಾಗಿ ಆರ್ಥಿಕ ಸ್ಥಿತಿಗತಿ ಉತ್ತಮವಾಗಿತ್ತು. ವ್ಯಾಪಾರ ವ್ಯವಹಾರ ಬಗ್ಗೆ ಉತ್ತಮವಾದ ಉಲ್ಲೇಖಗಳಿವೆ.

## ೩.೪. ಧಾರ್ಮಿಕ ವಿಚಾರ

ಜೈನ ಮತ್ತು ಬ್ರಾಹ್ಮಣ ಧರ್ಮಗಳು ಈ ೧೯ ಕಥೆಗಳಲ್ಲಿ ಪ್ರತಿಬಿಂಬಿತವಾದ ಪ್ರಮುಖ ಧರ್ಮಗಳಾಗಿವೆ. ಪ್ರಾಸಂಗಿಕವಾಗಿ ಬುದ್ಧ ದಾಸ-ಬೌದ್ಧ ಧರ್ಮೀಯ ಕನಕನಂದಿ ಪರಿವ್ರಜಕ ರಂಥವರ ಉಲ್ಲೇಖವಿದೆ.

ಆ ಕಾಲದಲ್ಲಿ ಸಮಾಜದ ಬೇರೆ ಬೇರೆ ಧರ್ಮದವರು ಒಬ್ಬರೊಬ್ಬರನ್ನು ಆದರಿಸುವ ಸಹಿಸುವ ವಾತಾವರಣವಿದ್ದಿತ್ತು. ಜೈನ ಶಾಸನ ದೇವತೆಯಾದ ಶ್ರೀಯಾ ದೇವತೆಯನ್ನು ಉರೊಳಗಿನ ಎಲ್ಲ ಜನರು ಪೂಜಿಸುತ್ತಿದ್ದರು.

ವಡ್ಡಾರಾಧನೆಯ ಕಾಲದ ಜನಜೀವನವು ಧರ್ಮ ಪ್ರಧಾನವಾದ ಸಮಾಜವಾಗಿತ್ತು ಸಮಾಜದಲ್ಲಿರುವ ಪ್ರತಿಯೊಬ್ಬರು ಒಂದಲ್ಲಿ ಒಂದು ಧರ್ಮದ ಆಶ್ರಯದಲ್ಲಿ ಬಾಳುತ್ತಿದ್ದರು. ಧರ್ಮ ಅವರ ಜೀವನದ ಉಸಿರಾಗಿತ್ತು. ಇದಕ್ಕಾಗಿ ಯಾವ ತ್ಯಾಗ ಮಾಡಲು ಜನ ಸಿದ್ದರಾಗಿದ್ದರು.

ಸಮಾಜದಲ್ಲಿ ಜೈನ ಸನ್ಯಾಸಿಗಳಿಗೆ ವಿಶೇಷ ಗೌರವವಿದ್ದು, ಸಮಾಜದ ಎಲ್ಲಾ ಜನರು ಅವರನ್ನು ಗೌರವದಿಂದ ಕಾಣುತ್ತಿದ್ದರು. ತೀರ್ಥಂಕರರ ಸಮವರಣ ಮಂಟಪ ತಮ್ಮೂರಿನ ಬಳಿ ಇಳಿದಿದ್ದರೆ, ಮಹರ್ಷಿಗಳು ತಮ್ಮೂರಿನ ಹೊರಗಿನ ಉದ್ಯಾನದಲ್ಲಿ ಬಂದು ಬೀಡು ಬಿಟ್ಟರೆ, ಅಲ್ಲಿನ ದೊರೆಗಳು ಮತ್ತು ಪ್ರಜೆಗಳು ವಿಶೇಷವಾಗಿ ಆನಂದ ಪಡುತ್ತಿದ್ದರು. ಎಲ್ಲರೂ ಆನಂದಭರಿತರಾಗಿ ಅಲ್ಲಿಗೆ ಹೋಗಿ ಪೂಜಿಸಿ, ವಂದಿಸಿ, ಧರ್ಮೋಪದೇಶ ಕೇಳಿಬರುತ್ತಿದ್ದರು. ತೀರ್ಥಂಕರು ಪರಮ ದೇವರ ಸಮವರಣ ಮಂಟಪದ ವಿಚಾರವನ್ನು ರಾಜನಿಗೆ ತಿಳಿಸುವ ಅಧಿಕಾರಿ ಇದ್ದು ಇವನನ್ನು 'ಋಷಿನಿವೇದಕ' ಎಂದು ಕರೆಯುತ್ತಿದ್ದರು.

'ವಿದ್ಯಚ್ಚೋರ ಋಷಿಯ ಕಥೆ'ಯಲ್ಲಿ ಪದ್ಮರಸನೆಂಬ ಅರಸನು ವಿದ್ಯುಚ್ಚೋರನಿಗೆ ಮೂವತ್ತೆರಡು ದಂಡನೆಗಳನ್ನು ನೀನು ಹೇಗೆ ಸೈರಿಸಿದೆ? ಎಂದು ಕೇಳಿದಾಗ, ಅದಕ್ಕೆ ವಿದ್ಯುಚ್ಚೋರನು ದೇವ ನಾನು ನನಗೆ ಓದು ಕಲಿಸುತ್ತಿದ್ದ ಉಪಾಧ್ಯಾಯರು ಸಹಸ್ರಕೂಟ ಚೈತ್ಯಾಲಯಕ್ಕೆ ದೇವರನ್ನು ವಂದಿಸಲೆಂದು ಹೋಗಿದ್ದೆವು, ಗುರುಗಳು ವಂದನೆ ಸಲ್ಲಿಸುತ್ತಿರಲು

ಅಲ್ಲೇ ಶಿವ ಗುಪ್ತಚಾರ್ಯರೆಂಬುವರು ಚರಿತ ಪುರಾಣವನ್ನು ವ್ಯಾಖ್ಯಾನ ಮಾಡುತ್ತಿದ್ದುದ್ದನ್ನು ಕಂಡು ಅವರ ಬಳಿ ಕುಳಿತಾಗ ನರಕ ಮತ್ತು ಸ್ವರ್ಗ ವರ್ಣನೆ ಮಾಡುತ್ತಿದ್ದರು. ಅದೇನೆಂದರೇ, ವೃತ, ಶೀಲ, ಚಾರಿತ್ರ ಗುಣಗಳಲ್ಲಿದವರೂ ಜೀವಿಗಳನ್ನು ಕೊಲ್ಲುವರು ರಾಗದ್ವೇಷ ಲೋಭಗಳಿಂದಾಗಿ ಸುಳ್ಳು ಹೇಳುವವರು ಅನೇಕ ಪ್ರಕಾರದ ಯಾತನೆಗಳನ್ನು ಮೂವತ್ತುಮೂರು ಸಾಗರ ಕಾಲ ಅನುಭವಿಸುತ್ತಾರೆ.

ಆದರೆ ದಾನ, ಪೂಜೆ, ಉಪವಾಸವೆಂಬ ನಾಲ್ಕು ಬಗೆಯ ಶ್ರಾವಕ ವತ್ರಗಳನ್ನು ಆಚರಿಸುವವರು, ತಪಸ್ಸು ಮಾಡುವವರು, ಸ್ವರ್ಗಮೋಕ್ಷಗಳೆಂಬ ಸುಖಗಳನ್ನು ಪಡೆಯುತ್ತಾರೆ. ಅಲ್ಲದೆ ಅಣುವ್ರತ, ಗುಣವ್ರತ, ಶಿಕ್ಷಾವ್ರತ ಎಂಬ ಹನ್ನೆರಡು ಬಗೆಯ ಶ್ರಾವಕ ಧರ್ಮಗಳ ತೀರ್ಥಂಕರರೇ ಪರಮ ದೇವರು. ಕೊಲ್ಲುವುದೇ ಧರ್ಮ, ಭಾಹ್ಯಾಭ್ಯಂತರ ಪರಿಗ್ರಹ ವಿಲ್ಲದೇ ತಪಸ್ಸು, ನವ ಪದಾರ್ಥ, ಪಂಚಾಣಸ್ತಿಕಾರ್ಯ ಷಡ್ ದ್ರವ್ಯಗಳನ್ನು ನಂಬುವುದೇ ಸಮ್ಯಕ್ ಎಂಬ ಧಾರ್ಮಿಕ ವಿಚಾರಗಳನ್ನು ವಿದ್ಯುಚ್ಚೋರು ತಾನ ಕೇಳಿದ ಅಂಶಗಳನ್ನು ರಾಜನಿಗೆ ತಿಳಿಸಿದವನು.

'ಗುರುದತ್ತ ಭಟಾರರ ಕಥೆ'ಯಲ್ಲಿ ಭಟಾರರ ಧಾರ್ಮಿಕ ಉಪದೇಶ- ದಯವೇ ಧರ್ಮ ಇಂದ್ರಿಯ ನಿಗ್ರಹವೇ ಧರ್ಮ ಯಾವಗಲೂ ಧರ್ಮವನ್ನು ಕುರಿತು ಚಿಂತಿಸತಕ್ಕದ್ದು.

'ಧರ್ಮಘೋಷ ಭಟಾರರ ಕಥೆ'ಯಲ್ಲಿ ಕೀರ್ತಿಧರ ಅರಸನ ಮಕ್ಕಳಾದ ಧರ್ಮಘೋಷ ಮತ್ತು ಧರ್ಮಕೀತಿಯರು ಗುಣೋತ್ತಮ ಭಟಾರರಲ್ಲಿ ಧರ್ಮವನ್ನು ಹೇಳಿರೆಂದು ಕೇಳಿಕೊಂಡಾಗ, ಆಗ ಭಟಾರರು 'ಧರ್ಮವೆಂಬ ಮಹಾರಾಜನು ಸಮ್ಯಕ್ತ್ವವೆಂಬ ಆನೆಯನ್ನೇರಿ ಕುಳಿತಿರುತ್ತಾನೆ, ಸುಜ್ಞಾನವೆಂಬ ಧ್ವಜಗಳ ಸಮೂಹವು ಅವನ ಸುತ್ತ ಮೆರೆಯುತ್ತದೆ. ನಾನಾ ಶೀಲ ಗುಣಗಳೆಂಬ ಸೈನ್ಯಗಳು. ಶಾಸ್ತ್ರಾಭ್ಯಾಸವೆಂಬ ಶಂಖ ಧ್ವನಿ, ಸಂವರವೆಂಬ ಕವಚ ಹೊಂದಿರುತ್ತಾನೆ. ಧರ್ಮ, ಅರ್ಥ, ಕಾಮ ಮೋಕ್ಷ ಇವೆಲ್ಲವುಗಳಲ್ಲಿ ಯಾವುದಾದರೊಂದು ಯಾರಿಗೆ ಇಲ್ಲವು ಅವರ ಬಾಳು ವ್ಯರ್ಥ' ಹೀಗೆ ಗುಣೋತ್ತಮ ಭಟಾರರು ಧರ್ಮವಿಷಯವನ್ನು ಹೇಳಿದರು.

ಧರ್ಮೋಪದೇಶಕರಾದ ಋಷಿ ಸೇವೆ ಮಾಡುವುದು ತಮ್ಮ ತಮ್ಮ ಪವಿತ್ರ ಕರ್ತವ್ಯವೆಂದು ಜನ ಭಾವಿಸಿದ್ದರು. ಕಾರಣ ವಡ್ಡಾರಾಧನೆ ಕೃತಿಯು ಹುಟ್ಟಿರುವುದೇ ಧರ್ಮ ಪ್ರಚಾರಕ್ಕಾಗಿಯೇ ಅದಕ್ಕಾಗಿಯೇ ಪ್ರತಿಯೊಂದು ಕಥೆಯಲ್ಲೂ ಕವಿನಮಗೆ ಧರ್ಮಶ್ರವಣ ಮಾಡಿಸುತ್ತಾನೆ.

'ಲಲಿತ ಘಟಯ ಕಥೆ'ಯಲ್ಲಿ ಸುಮಾರು ಮೂರು ಪುಟಗಳಷ್ಟು ದೀರ್ಘವಾದ ಧರ್ಮ ನಿರೂಪಣೆಯಿದೆ. ಆಭಯ ಘೋಷರು ನೀಡುವ ಧರ್ಮಪದೇಶ ಈ ರೀತಿಯಾಗಿದೆ "ಎಲ್ಲಿ ದಯೇ ಇದೆಯೋ ಅದೇ ಧರ್ಮ" ಎಲ್ಲಿ ಇಂದ್ರಿಯ ನಿಗ್ರಹ ವಿದೆಯೋ ಅದೇ ಧರ್ಮ

ಹದಿನೆಂಟು ದೋಷಗಳಲ್ಲಿದವರು ದೇವತೆ, ಜೀವಿಗಳನ್ನು ಕೊಲ್ಲದಿರುವುದೇ ಧರ್ಮ, ಬಾಹ್ಯ ಅಬ್ಯಂತರ ಪರಿಗ್ರಹಗಳನ್ನು ತೊರೆದು ಐದು ಇಂದ್ರಿಯಗಳನ್ನು ಗೆದ್ದು ಇಪ್ಪತ್ತೆರಡು ಪರೀಷಹಗಳನ್ನು ಸೈರಿಸಿ ಯಮ, ನಿಯಮ, ಸ್ವಾಧ್ಯಯ ಧ್ಯಾನಾನುಷ್ಠಾನ ಪರವಾಗಿ ತಪಸ್ಸು ಮಾಡುವ ಋಷಿಗಳೇ ನಿಜವಾದ ತಪಸ್ವಿಗಳು. ಜೀವನ ಪಾಪದಿಂದ ನರಕ ಹಾಗೂ ಪ್ರಾಣಿಜನ್ಮ ಧರ್ಮದಿಂದ ದೇವ ಜನ್ಮವನ್ನು ಪಡೆಯುತ್ತಾರೆ.

ಬಾಲವದೇ ಸ್ತ್ರೀವಧೆ ಗೋವಧೆ, ಬ್ರಾಹ್ಮಣವಧೆ, ಋಷಿವಧೆ, ಪಂಚಮಾಹಾ ಪಾತಕಗಳು, ಪಾಪ ಮಾಡಿದವರು ಏಕೇಂದ್ರಿಯ, ದ್ವೀಂದ್ರಿಯ, ತ್ರೀಂದ್ರಿಯ, ಚತುರೇಂದ್ರಿಯ, ಪಂಚೇಂದ್ರಿಯ ಜೀವಿಗಳಾಗಿ ಹುಟ್ಟುತ್ತಾನೆ. ಪುಣ್ಯ ಪಾಪಗಳ ಮಿಶ್ರಣದಿಂದ ಮನುಷ್ಯತ್ವವನ್ನು ಪಡೆಯುತ್ತಾರೆ, ಹಿಂದೆ ಮಾಡಿದ ಪಾಪಕರ್ಮಗಳ ಫಲವಾಗಿ ಶಾರೀರ, ಮಾನಸ, ಆಗುಂತಕ, ದುಃಖಗಳನ್ನು, ಅನಿಷ್ಟ ಸಂಯೋಗ, ಇಷ್ಟವಿಯೋಗ ಹಾಗೂ ರಾಗಶೋಕ ದಾರಿದ್ರ್ಯಗಳನ್ನು ಅನುಭವಿಸುತ್ತಾರೆ. ಅಲ್ಲದೆ ಈ ಜೀವಿಗಳು ತಮ್ಮ ಉತ್ತಮ ಕರ್ಮದ ಫಲವಾಗಿ ಶ್ರೀಸಂಪತ್ತು, ವೈಭವ, ಐಶ್ವರ್ಯ, ಆರೋಗ್ಯ ಹೊಂದಿ ಪುತ್ರ, ಮಿತ್ರ, ಕಳತ್ರ, ಸ್ವಜನ ಬಂಧು ವರ್ಗದೊಂದಿಗೆ ಸುಖವಾಗಿ ಬಾಳುತ್ತಾರೆ.

ಯಾರು ಧರ್ಮಕಾರ್ಯಗಳನ್ನು ಮಾಡುವವರೋ ಅವರು ಸೌಧರ್ಮ, ಈಶಾನ, ಸನತ್ಕುಮಾರ, ಮಹೇಂದ್ರ, ಬ್ರಹ್ಮಬ್ರಹ್ಮೋತ್ತರ, ಲಾಂತವ, ಕಾವೇಷ್ಟ, ಶುಕ್ರ, ಮಹಾಶುಕ್ರ, ಶತಾರ, ಸಹಸ್ರಾರ, ಅನತ, ಪ್ರಾಣದ, ಅಹರಣ, ಅಚ್ಯುತ ಎಂಬ ಹದಿನಾರು ಕಲ್ಪಗಳಲ್ಲಿ ಹುಟ್ಟಿ ಸ್ವರ್ಗಸುಖವನ್ನು ಪಡೆಯುತ್ತಾರೆ.

ಇನ್ನು ಮೋಕ್ಷದ ವಿಚಾರವಾಗಿ ಹುಟ್ಟು, ಮುಪ್ಪು, ಸಾವುಗಳಲ್ಲಿದೆ ಅನಿಷ್ಟ, ಸಂಯೋಗ ಇಷ್ಟವಿಯೋಗಳಾಗಲಿ, ಶಾರೀರ ಮಾನಸ, ಆಗುಂತಕ ಸಹಜವಾದ ದುಃಖಗಳಾಗಲಿ, ಆಹಾರ, ಭಯ ಮೈಥುನ, ಪರಿಗ್ರಹಗಳಾಗಲಿ, ವಾತ, ಪಿತ್ತ, ಶ್ಲೇಷ, ಜ್ವರ, ಅತಿಸಾರಗಳೆಂಬ ವ್ಯಾದಿಗಳೂ ಇಲ್ಲದೆ ಇರುವುದು. ಅದು ಹೋಲಿಕೆಯ ಇಲ್ಲದ ಸ್ಥಿತಿ ಎಂದಿಗೂ ನಾಶವಾಗದ ಸ್ಥಿತಿ, ಪಾಪ ಇಲ್ಲದಿರುವುದು, ತಾನೇ ತಾನಾದ ಅನಂತ ಜ್ಞಾನ, ಅನಂತದರ್ಶನ ಅನಂತ ವೀರ್ಯ ಅನಂತ ಸುಖ ಪಡೆದು ಮೋಕ್ಷ ಸಾಧಿಸುತ್ತಾನೆ ಎಂದು ಅಭಯ ಘೋಷ ಭಟಾರರು ಲಲಿತ ಘಟೆಗೆ ಧರ್ಮೋಪದೇಶದ ವಿಚಾರ ತಿಳಿಸುತ್ತಾರೆ.

ವಡ್ಡರಾಧನೆಯ ಕಾಲದಲ್ಲಿ ಪ್ರತಿಧರ್ಮದವರು ತಮ್ಮ ತಮ್ಮ ಧರ್ಮದ ಹಿರಿಮೆಯನ್ನು ಜನತೆಗೆ ಎತ್ತಿ ತೋರಿಸಿ ಪರ ಧರ್ಮವನ್ನು ಅಲ್ಲಗಳೇಯುತ್ತಿದ್ದರು. ತಮ್ಮ ಧರ್ಮದ ಉತ್ತಮಾಂಶಗಳನ್ನು ಎತ್ತಿ ಹಿಡಿದು ಅನ್ಯಧರ್ಮದ ವಿಚಾರಗಳನ್ನು ಸಹಿಸುತ್ತಿರಲಿಲ್ಲ ವೆಂಬ ಕೆಲವು ಸನ್ನಿವೇಶಗಳು ವಡ್ಡರಾಧನೆಯಲ್ಲಿ ಕಂಡು ಬರುತ್ತವೆ. "ಸುಕುಮಾರ

ಸ್ವಾಮಿಯಕಥೆ"ಯಲ್ಲಿ ಸೋಮಶರ್ಮನೆಂಬ ಬ್ರಾಹ್ಮಣನು ತನ್ನ ಮಗಳು ನಾಗಶ್ರೀ ಸವಣರ ಧರ್ಮಸ್ವೀಕರಿಸಿರುವುದನ್ನು ಸಹಿಸುವುದಿಲ್ಲ ಹೋಗು ಹೋಗು ಬ್ರಾಹ್ಮಣಾ! ಹೋಗಿ ಅರಸನಿಗೆ ಹೇಳು ಹೋಗು" ಎಂದು ಭಟಾರರು ಹೇಳಲು ಒಂದು ಸೊಪ್ಪಿನ ಗೊಂಚಲನ್ನು ಹಿಡಿದು "ಅಬ್ರಹ್ಮಣ್ಯ ಬೋ ಅಬ್ರಹ್ಮಣ್ಯ!!"[೯] ಎಂದು ಕೆರಿಚಿಕೊಳ್ಳುತ್ತಾ ಅರಮನೆಗೆ ಬಂದು ಚಂದ್ರವಾಹನ ರಾಜನಿಗೆ ಮೊರೆ ಇಡುತ್ತಾನೆ. "ಮಹಾರಾಜ ನಾನು ಬತ್ತಲೆಯ ಜೈನ ಸನ್ಯಾಸಿಗಳಿಂದ ಮೋಸಹೋಗಿದ್ದೇನೆ ಎಂದ. ಅರಸ ಅವರ ಪರಿವಾರದೊಂದಿಗೆ ನಾಗರಾಣಕ್ಕೆ ಹೋಗಿ ವಿಚಾರಿಸಿದಾಗ ಧರ್ಮದ ಘರ್ಷಣೆ ತುಂಬ ಬಹಿರಂಗವಾಗಿ ರಾಜ ಮತ್ತು ಪುರಜನರ ಸಮ್ಮುಖದಲ್ಲಿ ನಡೆಯುತ್ತದೆ ಎಂದಾಗ ಒಬ್ಬಜೈನ ಮುನಿ ಮತ್ತು ಒಬ್ಬ ಬ್ರಾಹ್ಮಣ ಪುರೋಹಿತ ಇಬ್ಬರಲ್ಲಿ ಪರಸ್ಪರ ದ್ವೇಷ ಭಾವ ವಿದ್ದ, ಉದಾಹರಣೆ ಈ ಕಥೆಯಿಂದ ಗೋತ್ತಾಗುತ್ತದೆ. ಮತೀಯ ದ್ವೇಷ ಕೆಲವು ಸಾರಿ ಪ್ರತೀಕಾರ ತೀರಿಸಿಕೊಳ್ಳುವ ಘಟ್ಟದವರೆಗೂ ಮುಂದುವರಿಯುತ್ತದೆ. "ವೃಷಭಸೇನ ಭಟಾರರ ಕಥೆಯಲ್ಲಿ" ಬರುವ ಬುದ್ಧಜ ಮತ್ತು ಗುರುದತ್ತ ಭಟಾರರ ಕಥೆಯಲ್ಲಿ ಬರುವ ಬುದ್ಧದಾಸ ಅವರ ಹೆಸರನ್ನು ನೋಡಿದಾಗ ಬೌದ್ಧಧರ್ಮದವರಿರಬೇಕೆಂದು ತೋರುತ್ತದೆ ಇಬ್ಬರೂ ಜೈನ ಋಷಿಗಳ ಮೇಲೆ ಸೇಡು ತೀರಿಸಿಕೊಳ್ಳುತ್ತಾರೆ. ಈ ಘಟನೆಗಳು ಮತೀಯ ದ್ವೇಷ ವಿಚಾರವನ್ನು ತಿಳಿಸುತ್ತದೆ.

ಈ ರೀತಿಯಾಗಿ ಆ ಕಾಲದ ಧಾರ್ಮಿಕ ವಿಚಾರಗಳನ್ನು ವಡ್ಡಾರಾಧನೆ ಕತೆಗಳಲ್ಲಿರುವುದು ತಿಳಿದುಬರುತ್ತದೆ.

### ೩.೫. ರಾಜ್ಯಾಡಳಿತ ಪದ್ಧತಿ

ವಡ್ಡಾರಾಧನೆಯ ಕಥೆಗಳ ಪ್ರಾರಂಭದಲ್ಲಿ ಬರುವ ನಾಡು, ಪೊಳಲು, ಅರಸ - ಅರಸಿ, ಮಂತ್ರಿ ಮೊದಲಾದ ಸಂಗತಿಗಳು ಬಿಟ್ಟರೆ, ಆ ಕಾಲದ ಆಡಳಿತ, ಸ್ವರೂಪ ರಾಜ ಪ್ರಭುತ್ವವಾಗಿತ್ತೆಂದು ಹೇಳಬಹುದು. ಅಂದರೆ ಅರಸನೇ ಎಲ್ಲದಕ್ಕೂ ಕೇಂದ್ರ ಬಿಂದುವಾಗಿದ್ದು, ರಾಜನು ಪರಮಾಧಿಕಾರಿಯಾಗಿದ್ದನು, ಏಕೆಂದರೆ ಬೇರೆ ಯಾವ ಪ್ರಕಾರದ ಆಡಳಿತ ಇದ್ದ ಬಗ್ಗೆ ಯಾವ ಸೂಚಕ ಸಂಗತಿ ಅಥವಾ ಪದವಾಗಲಿ ಯಾವ ಕಥೆಯಲ್ಲೂ ಕಂಡುಬರುವುದಿಲ್ಲ. ರಾಜ ಧಾನಿಯೊಂದಿಗೆ ಉಲ್ಲೇಖಿಸಲಾದ ಪ್ರದೇಶ, ನಾಡುಗಳ ಪಟ್ಟಿ ದೊರೆಯುತ್ತದೆ. "ಅಂಗ, ವೆಂಗಿ ಕಳಿಂಗ, ಕಾಂಬೋಜ, ಕಾಶಿ, ಕೌಶಲ, ಪಲ್ಲವ, ಪಾಂಚಾಲ, ಮಗಧ, ಮಾಳವ, ವತ್ಸೆ, ಮಹಾರಾಷ್ಟ್ರ, ಕುಣಾಳ, ಕುರುಚಾಂಗಣ, ದ್ರವಿಳ, ಲಾಳ, ಕರ್ನಾಟ, ಗೌಳ, ಸುಹುಮ, ಸುರಕ್ತಾನ, ಸೂರಸೆನಿಯ, ಸಿಂಧುವಿಷಯ, ದ್ರವಿಳ ವಿಷಯ. ಕೊಂಕಣವಿಷಯ, ಕಳ್ಳಪ್ಪು".[೧೦] ಈ ರೀತಿಯಾಗಿ ಅನೇಕ ಹೆಸರುಗಳನ್ನು ಕಾಣಬಹುದು. ಅಂದರೆ ಅರಸು ಕುಮಾರಿಯ

ಸ್ವಯಂವರಕ್ಕೆ ಬಂದ ರಾಜರ ನಾಡುಗಳಾಗಿವೆ. ಈ ಪಟ್ಟಗಳಿಂದ ನಮಗೆ ಕಂಡು ಬರುವುದೇನೆಂದರೆ ಅರಸನು ರಾಜ್ಯದ ಅಥವಾ ನಾಡಿನ ಪ್ರಮುಖ ಶಾಸಕನಾಗಿದ್ದನು. ಅಲ್ಲದೆ ಸಾಮಂತ್ ಮಹಾಸಾಮಂತರ್ ಮಂಡಳಿಕರ್ ಮೊದಲಾದವರು, ಪ್ರಾದೇಶಿಕ ಆಡಳಿತದ ಕೆಲವು ವಿಭಾಗಗಳನ್ನು ನೋಡಿಕೊಳ್ಳುತ್ತಿದ್ದರು. ರಾಜ್ಯ ಆಡಳಿತದಲ್ಲಿ ಅರಸನು ವಿಶೇಷವಾಗಿ ಪ್ರಧಾನಮಂತ್ರಿ, ಪುರೋಹಿತ, ರಾಜಶ್ರೇಷ್ಠಿ ಇತರ ಮಂತ್ರಿಗಳು ಮತ್ತು ನಿಯೋಗಿಗಳು ಅಧಿಕಾರಿಗಳು ಮೊದಲಾದವರ ಸಲಹೆಗಳನ್ನು ಅರಸನು ಪಡೆದು ಆಡಳಿತ ನಡೆದುತ್ತಿದ್ದನು.

"ಸಿಂಹಾಸನ ಬೆಳ್ಗೊಡೆ - ಬೆಳ್ಳಿಯ ಛತ್ರ, ಚಾಮರ, ಪಾಳಿಧ್ವಜ, ಧ್ವಜಗಳ ಸಾಲು ಮತ್ತು ಪಂಚಮಹಾ ಶಬ್ದ – ಐದು ಬಗೆಯ ವಾದ್ಯಗಳು ಅರಸೊತ್ತಿಗೆಯ ಚಿಹ್ನೆಗಳಾಗಿದ್ದವು".

ರಾಜ್ಯ ಕಂದಾಯ ವ್ಯವಸ್ಥೆಯ ಕುರಿತು ಯಾವ ಕಥೆಗಳಲ್ಲಿ ಹೆಚ್ಚಿನ ಪ್ರಸ್ತಾಪವಿಲ್ಲ ದಿನಾರ, ದಮ್ಮ ಅಥವಾ ದ್ರಮ್ಮ, ಕಸವರ ಮತ್ತು ಪಣ ಈ ಮುಂತಾದ ನಾಣ್ಯಗಳು ಅನೇಕ ಕಥೆಗಳಲ್ಲಿ ಉಲ್ಲೇಖಿತವಾಗಿರುವುದರಿಂದ ಈ ನಾಣ್ಯಗಳು ಆ ಕಾಲದಲ್ಲಿ ವಿವಿಧ ಪ್ರದೇಶಗಳಲ್ಲಿ ಬಳಕೆಯಲ್ಲಿದ್ದವೆಂಬುದು ಗೊತ್ತಾಗುತ್ತದೆ.

ಅರಸನು ರಾಜ್ಯದ ಕಾನೂನು ನ್ಯಾಯ ಮತ್ತು ಸಮಾಜದ ಸುವ್ಯವಸ್ಥೆಯ ಪ್ರಮುಖನಾಗಿದ್ದನು. ಆದ್ದರಿಂದ ಪ್ರಜೆಗಳಿಗೆ ಏನಾದರೂ ಅನ್ಯಾಯವಾದರೂ ನೇರವಾಗಿ ಅರಸನೆಡೆಗೆ ಪ್ರತ್ಯಕ್ಷ ಹೋಗಿ ತಮ್ಮ ದೂರುಗಳನ್ನು ನೀಡುತ್ತಿದ್ದರು. ನ್ಯಾಯ ದೊರಕಿಸಲು ಅಪರಾಧಿಗಳಿಗೆ ಅನೇಕ ಬಗೆಯ ಶಿಕ್ಷೆಗಳು ಅಥವಾ ದಂಡನೆಗಳ ಉಲ್ಲೇಖಗಳಿವೆ.

'ಸುಕುಮಾರ ಸ್ವಾಮಿಯ ಕಥೆ'ಯ ಎರಡು ಕಥೆಗಳಲ್ಲಿ ರಾಜಾಜ್ಞೆಯ ವಿವರಣೆ ನೋಡಬಹುದು, ನಾಗದತ್ತನೆಂಬ ವರ್ತಕ ಮತ್ತು ಅವನ ಹೆಂಡತಿ ಗಂಗೆ ಇವರ ಮಗ ನಾಗಸೂರ ಎಂಬುವನು ಅವರಿಗೆ ಎಂಟು ಜನ ಹೆಂಡಿರು. ಆದರೂ ಅವರಲ್ಲಿ ಅವನು ಸಂತೋಷ ಪಡದೆ ಮೊದಾಳಿಯೋಂದಿಗೆ ರಹಸ್ಯವಾಗಿ ಪ್ರಣಯ ಬೆಳಸಿಕೊಂಡನು. ಒಂದು ದಿನ ಅವಳೊಂದಿಗೆ ಚಂಪಾನಗರಕ್ಕೆ ಬರಲು ತಳವಾರನು ಕಂಡು ಅವರನ್ನು ಹಿಡಿದು ಅರಸನಿಗೆ ಒಪ್ಪಿಸಿದನು. ಅಕ್ರಮವಾದ ಸಂಬಂಧ ಇಟ್ಟುಕೊಂಡುದಕ್ಕಾಗಿ ಇವರಿಬ್ಬರೂ ಕಾದ ಕಬ್ಬಿಣದ ಪ್ರತಿಮೆಗಳನ್ನು ತಬ್ಬಿಕೊಳ್ಳಬೇಕೆಂದು ಎಂದು ರಾಜನು ಆಜ್ಞೆ ಮಾಡಿದ್ದನು.

ಅರಸರ ಹಸುಗಳನ್ನು ಕಾಯುವವನು ವೀರಪೂರ್ಣ ಎಂದು ಒಂದು ದಿನ ರಾಜನು ಸಂತೋಷದಿಂದ ಅವನಿಗೆ ತನ್ನ ಹಸುಗಳ ಹಿಂಡಿನಲ್ಲಿ ಅತ್ಯುತ್ತಮವಾದ ಹತ್ತು ಹೈನುಗಳನ್ನು ಮೂರು ಸಾವಿರ ಕಂಡುಗ ಬತ್ತವನ್ನು ಉಡುಗೊರೆಯಾಗಿ ಕೊಟ್ಟನು. ಇದನ್ನೆ ದುರುಪಯೋಗ ಪಡಿಸಿಕೊಂಡು ವೀರಪೂರ್ಣ ಸಾಮಂತರು, ನಿಯೋಗಿಗಳು ಅರಸಿಯರ ಮುಂತಾದವರ ಬಳಿ ಇದ್ದ ಅತ್ಯುತ್ತಮವಾದ ಹಸುಗಳನ್ನು ಎಮ್ಮೆಗಳನ್ನು ರಾಜನು ತನಗೆ ಕೊಟ್ಟಿದ್ದಾನೆಂದು ಹೇಳಿ,

ಕಿತ್ತುಕೊಂಡು ಅನುಭವಿಸ ತೊಡಗಿದನು. ತತ್ ಕಾರಣ ಸಾಮಂತರು, ನಿಯೋಗಿಗಳು ಪಟ್ಟಣದ ಜನರು – ಎಲ್ಲರೂ ತಮ್ಮ ದೂರುಗಳನ್ನು ಹೇಳಿಕೊಂಡರು, ಆಗ, ರಾಜನಿಗ ವಿಪರೀತ ಕೋಪ ಬಂತು, ಮಹಾಲೋಭಿ ಇವನು ನಾನು ಕೊಟ್ಟಿದ್ದರಲ್ಲಿ ತೃಪ್ತಿಪಡದೆ ಜನರ ಹಸುಗಳನ್ನು ಕಿತ್ತುಕೊಳ್ಳಲು ತೊಡಗಿದ್ದಾನೆ ಈ ಕ್ಷಣದ ಇವನನ್ನು ಕೊಲ್ಲಿರಿ ಎಂದು ಆಜ್ಞೆ ಮಾಡಿದನು.

ಈ ರೀತಿಯಾಗಿ ಎರಡು ಕಥೆಗಳಲ್ಲಿ ರಾಜನ ಕಟ್ಟಾಜ್ಞೆ ಉಲ್ಲೇಖ ಇರುವುದು ಅಲ್ಲದೆ ''ವಿದ್ಯುಚ್ಚೋರ ರಿಸಿ'ಯ ಕಥೆಯಲ್ಲಿ ೩೨ ಪ್ರಕಾರ ದಂಡನೆಗಳ ಉಲ್ಲೇಖವಿದೆ.

'ಗಜಕುಮಾರನ ಕಥೆಯಲ್ಲಿ ಚಾತುರ್ಬಲ - ನಾಲ್ಕು ಸೈನ್ಯದ ಉಲ್ಲೇಖವಿದೆ.

ಪೌದನ ಪುರವೆಂಬ ಪಟ್ಟಣ ಅಲ್ಲಿಯ ಅರಸ ಅಪರಾಜೀತ ಪ್ರಚಂಡ ಪರಾಕ್ರಮಶಾಲಿ ಯಾರಿಗೂ ಹೆದರದೆ ಇದ್ದ, ಅವನು ವಿಷ್ಣುವಿನ ಆಜ್ಞೆಗೂ ವಶನಾಗದೆ ಇದ್ದನು. ಹೀಗಿರಲು ಒಮ್ಮೆ ವಿಷ್ಣುವು ''ಪೌದನ ಪುರಾಧಿಪತಿಯಾದ ಅಪರಾಜೀತನನ್ನು ಯದ್ಧದಲ್ಲಿ ಗೆದ್ದು ಯಾವನು ಸೆರೆಹಿಡಿದು ತರುತ್ತಾನೋ, ಅವನು ಕೇಳಿದುದನ್ನೆಲ್ಲ ಕೊಡುತ್ತೇವೆ ಎಂದು ಘೋಷಣೆ ಹೊರಡಿಸಲು, ಗಜಕುಮಾರನಿಗೆ ಆದರಲ್ಲಿ ಆಸಕ್ತಿಯುಂಟಾಯಿತು. ಇದನ್ನು ತಿಳಿದ ಅರಸನು ಅವನನ್ನು ಕರೆಸಿ ಚತುರ್ಬಲ ಸೈನ್ಯವನ್ನು ಕೊಟ್ಟು ಅಪರಾಜೀತನ ಮೇಲೆ ಯುದ್ಧಕ್ಕೆ ಕಳುಹಿಸಿದ್ದಾರು. ಗಜಕುಮಾರ ಯದ್ದದಲ್ಲಿ ಗೆದ್ದನು. ಅಪರಾಜೀತನನ್ನು ಹಿಂಗೆಟ್ಟ ಮುರಿಕಟ್ಟಿ ಆನೇಕ ಆನೆ, ಕುದುರೆ, ವಸ್ತವಾಹನ ಗಳೊಂದಿಗೆ ತಂದು ವಿಷ್ಣುವಿಗೆ ಒಪ್ಪಿಸಿದನು. ಇದು ಶತ್ರಗಳ ಮೇಲೆ ದಾಳಿ ಮಾಡುವ ಪ್ರಸಂಗ ತಿಳಿಸಿಕೊಡುತ್ತದೆ.

ತಳಾರ – ತಳವಾರನು ಉರ ಕಾವಲುಗಾರ ನಗರ ರಕ್ಷಕನಾಗಿದ್ದನು. ಅಂದಿನ ಆಡಳಿತ ಶಾಖೆಯ ಪ್ರತಿನಿಧಿಯಾಗಿದ್ದನು. 'ಸುಕುಮಾರ ಸ್ವಾಮಿಯ ಕಥೆ'ಯ ಉಪಕಥೆಯಲ್ಲಿ ಸುಧಾಮೇಯ ಕಥೆಯಲ್ಲಿ ಸುಧಾಮೆಯು ನಟ್ಟನಡುರಾತ್ರಿಯಲ್ಲಿ ಕೊಟ್ಟ ಭಾಷೆಯನ್ನು ಪೂರೈಸಲು ತನ್ನ ಮೈದುನ ನೀರುವ ಆಪಣಕ್ಕೆ ಹೋಗುತ್ತಿರುವಾಗ ಊರ ತಳವಾರನು 'ಇಷ್ಟು ಹೊತ್ತಿನಲ್ಲಿ ಎಲ್ಲಿ ಹೋಗುತ್ತಿದ್ದೇಯಾ ಕೆಟ್ಟ ಹೆಂಗಸೆ'' ಎಂದು ಗರ್ಜಿಸುವುದು ಮತ್ತು ಮರಳಿ ಬರುವಾಗ ನೀನು ಕೆಟ್ಟ ಹೆಂಗಸು ಎಂದು ಭಾವಿಸಿದ್ದೆ ನಿನ್ನಷ್ಟು ಒಳ್ಳೆಯವರು ಯಾರು ಇಲ್ಲ ಕೊಟ್ಟ ಮಾತನ್ನು ತಪ್ಪದೆ ಬಂದಿದ್ದೀಯೇ ನೀನು ಸತ್ಯವಾದಿ ಹೋಗವ್ವಾ ಹೋಗು' ಎಂದು ಕಳುಹಿಸುವಾಗ ಈ ಕಥೆಯು ತಳವಾರನ ನಗರ ರಕ್ಷಣೆಯ ನಿಷ್ಟೆಯನ್ನು ಮತ್ತು ಕರ್ತವ್ಯವನ್ನು ತೋರಿಸುತ್ತದೆ.

ಮಾಂಡಲಿಕರು ಅರಸನ ಆಜ್ಞೆಯನ್ನು ಮೀರಿದಾಗ ಅರಸ ತನ್ನ ಸೈನ್ಯ ಕಳುಹಿಸಿ ಅವರನ್ನು ಸದೆಬಡಿಯ ಹಚ್ಚುತ್ತಿದ್ದನು. ಅವಶ್ಯಕತೆ ಬಿದ್ದಾಗ ಅರಸ ತಾನೇ ಸೈನ್ಯದ ನೇತೃತ್ವ ವಹಿಸಿ

ಶತ್ರುಗಳ ಮೇಲೆ ದಾಳಿ ಮಾಡುತ್ತಿದ್ದನು. ಎಂಬ ಅಂಶಗಳು ರಾಜ್ಯಡಾಳಿತ ವ್ಯವಸ್ಥೆಯನ್ನು ವಿವರಿಸುತ್ತದೆ.

### ೩.೬. ಸಾಹಿತ್ಯಕ ಕೃತಿಯಾಗಿ ವಡ್ಡಾರಾಧನೆ

ಕನ್ನಡ ಸಾಹಿತ್ಯದಲ್ಲಿ ಉಪಲಬ್ದವಾಗಿರುವ ಪ್ರಾಚೀನ ಗದ್ಯ ಗ್ರಂಥಗಳಲ್ಲಿ ವಡ್ಡಾರಾಧನೆ ಮೊದಲನೆಯದು.

ಜೈನ ಸಿದ್ಧಾಂತಕ್ಕೆ ಅನುಗುಣವಾಗಿ ನೀತಿ ಪ್ರಧಾನವಾದ ಮತ್ತು ತಪಸ್ಸಾಧಕವಾದ ಧರ್ಮ ಪ್ರತಿಪಾದನೆಯೇ ಇಲ್ಲಿನ ಕಥಾ ರಚನೆಗಳ ಉದ್ದೇಶವಾಗಿರುವುದರಿಂದ ಸಾಹಿತ್ಯದ ಲಕ್ಷಣಗಳ, ಉತ್ತಮ ಅಂಶಗಳನ್ನು ಈ ಗದ್ಯ ಕೃತಿಯಲ್ಲಿ ಕಾಣಬಹುದಾಗಿದೆ. ಘಟನೆಗಳನ್ನು ಪ್ರಧಾನವಾಗಿರಿಸಿಕೊಂಡು ಕಥನ ಸ್ವರೂಪವುಳ್ಳ ಹಲವಾರು ಕಥೆಗಳ ಕಥಾಸಂಕಲನ ಇದಾಗಿದೆ. "ಕಾವ್ಯದ ಪ್ರಮುಖ ಲಕ್ಷಣಗಳಾದ ಅಲಂಕಾರ – ವರ್ಣನೆ – ರಸಭಾವ – ಧ್ವನಿ - ಪಾತ್ರರಚನೆ ಮುಂತಾದವು ಅಲ್ಲಲ್ಲಿನ ಕಥೆಗಳಲ್ಲಿ ಗೋಚರಿಸುತ್ತಿದ್ದರೂ ಕಾವ್ಯ, ತತ್ವ, ಪ್ರತಿಪಾದನೆ ಈ ಕೃತಿರಚನೆಯ ಉದ್ದೇಶವಾಗಿದ್ದು, ಸ್ವತಃ ವಿದ್ವಾಂಸನೂ ತತ್ವ ವೇತ್ತನೂ ಲೋಕಾನುಭವಿಯೂ ಆದ ಈ ಕಥಾಕಾರನ ವಾಗಾಭಿವ್ಯಕ್ತಿಯಲ್ಲಿ ಸಹಜವಾಗಿ ಅಂತಹ ಕಾವ್ಯ ಗುಣಗಳು ಮೂಡಿ ಬಂದಿವೆ".[೧೧]

ಮಾನವನ ಜೀವನವನ್ನು ರೂಪಿಸುವುದರಲ್ಲಿ ಕಥೆಗಳ ಪಾತ್ರ ಪ್ರಮುಖವಾಗಿರುತ್ತದೆ. ಕಥಾಶ್ರವಣದಿಂದ ಆನಂದ ಲಬಿಸಿ ಚಿತ್ತವಿಕಾಸವಾಗಿ ಮಾನವ ಪರಿಪೂರ್ಣತೆಯ ಕಡೆಗೆ ಅಡಿಯಿಡಲು ದಾರಿಯಾಗುತ್ತದೆ. ಕಥೆಗಳ ಗುರಿ ನೀತಿ; ಸನ್ಮಾರ್ಗ ದರ್ಶನವಾಗಿರುವುದರಿಂದ ಈ ಸನ್ಮಾರ್ಗ ದರ್ಶನ ಅಂಶಗಳೆಲ್ಲವನ್ನು ಈ ವಡ್ಡಾರಾಧನೆಯದ ಗದ್ಯ ಗ್ರಂಥದಲ್ಲಿ ಕಾಣುತ್ತೇವೆ.

'ವಡ್ಡಾರಾಧನೆಯಲ್ಲಿ ಹತ್ತೊಂಬತ್ತು ಕಥೆಗಳು, ಎಲ್ಲವು ಜೈನ ತತ್ವವನ್ನು ಗುಣವಾಗಿ ತಪವನ್ನಚರಿಸಿ ಸದ್ಗತಿಯನ್ನು ಪಡೆದ ಮಹಾತ್ಮರ ಕಥೆಗಳು ಜೀವಿಯ ಪೂರ್ವೋತ್ತರ ಭವಾವಳಿಯ ಕಥೆಗಳು ಇವುಗಳಲ್ಲಿ ಹಾಸುಹೊಕ್ಕಾಗಿದೆ'.

"ಪ್ರತಿ ಕಥೆಯ ಪ್ರಾರಂಭದಲ್ಲಿಯೂ ಪ್ರಾಕೃತ ಭಾಷೆಯ ಒಂದು ಗಾಹೆ, ಗಾಥಾ ಇರುತ್ತದೆ. ಅದರಲ್ಲಿ ಆಯಾ ಕಥಾನಾಯಕನು ಭಟಾರನಾಗಿ ಪರೀಕ್ಷಹ ಉಪಸರ್ಗಾದಿಗಳನ್ನು ಸಹಿಸಿ ಸಮಾಧಿ ಮರಣ ಹೊಂದಿದ ಸೂಚನೆ ಇರುತ್ತದೆ. ಕಥಾ ವಿಸ್ತಾರವನ್ನು ನಿರೂಪಣೆ ಮಾಡುವ ಮೊದಲು ಒಂದೆರಡು ಮಾತುಗಳಲ್ಲಿ ಕಥಾಸಾರವನ್ನು ತಿಳಿಸುವ ಪದ್ಧತಿ

ಹಿಂದಿನಿಂದಲೂ ಪ್ರಚಲಿತವಿದ್ದಂತೆ ತೋರುತ್ತದೆ"[೧೨] ಈ ಕ್ರಮವನ್ನು ಕನ್ನಡ ಪ್ರಾಚೀನ ಗದ್ಯ ಕೃತಿಯಾದ ವಡ್ಡಾರಾಧನೆಯಲ್ಲಿ ಕಾಣುತ್ತೇವೆ.

ಕಥೆಗಳಲ್ಲಿ ಕೆಲವು ತೀರ ಚಿಕ್ಕವು. ಕೆಲವು ತೀರ ದೊಡ್ಡವು ಇರುತ್ತವೆ. ತೀರ ಚಿಕ್ಕವುಗಳಲ್ಲಿ ಕಥಾಂಶವೇ ಕಡಿಯಾಗಿದೆ. ದೊಡ್ಡ ಕಥೆಗಳಲ್ಲಿ ಕಥೆಯೊಳಗಿನ ಕಥೆ – ಉಪಕಥೆಗಳಿಂದ ಕಥಾಂಶ ನಿಬಿಡವಾಗಿರುತ್ತದೆ. ಸಾಮಾನ್ಯವಾಗಿ ಹಲವು ವ್ಯಕ್ತಿಗಳ ಹಲವು ಜನ್ಮಗಳ ವಿವಿಧ ಸಂಬಂಧಗಳ ಮೂಲಕ ಭವಾವಳಿಯ ತತ್ವವನ್ನು ಸ್ಥಾಪಿಸುವ ಪ್ರಯತ್ನವು ಅವುಗಳಲ್ಲಿ ಒಡೆದು ಕಾಣುತ್ತೇವೆ. ಆ ಮೇಲೆ ಜೈನ ಮತದ ಪ್ರಕಾರ ತಪಸ್ಸು ಮತ್ತು ವ್ರತಗಳಿಗಿರುವ ಮಹತ್ವವನ್ನು ಅವು ತಿಳಿಸುತ್ತವೆ.

'ವಡ್ಡಾರಾಧನೆ' ಕತೆಗಾರಿಕೆಗಿಂತ ಗದ್ಯ ಶೈಲಿಯಿಂದ ಇಡೀ ಕನ್ನಡ ಸಹಿತ್ಯದಲ್ಲಿ ಅಪೂರ್ವ ಸ್ಥಾನವನ್ನು ಪಡೆದಿದೆ. ಅಲ್ಲದೆ ಧಾರ್ಮಿಕ ಉದ್ದೇಶದಿಂದ ಬರೆದ ಸಾಂಪ್ರದಾಯಿಕ ಕಥೆಗಳ ಒಂದು ಕಟ್ಟು, ಕಲಾಕೃತಿಯೆಂಬ ಒಗ್ಗಟ್ಟು ಈ ಕೃತಿಯಲ್ಲಿದೆ. ಈ ಕಥೆಗಳನ್ನು ಹೇಳಿದವನು ಹುಟ್ಟು ಕಥೆಗಾರ ಮತ್ತು ಮೇಲಾದ ಗದ್ಯ ಶೈಲಿಕಾರ ಎಂಬುವುದು ಖಂಡಿತ. ಕನ್ನಡ ಸಾಹಿತ್ಯ ಚರಿತೆಯಲ್ಲಿ ಅವನ 'ವಡ್ಡಾರಾಧನೆ' ಕೊನೆಯವರೆಗೂ ನೆನೆಯತಕ್ಕ ವೈಶಿಷ್ಟ್ಯಪೂರ್ಣ ಗ್ರಂಥವಾಗಿದೆ.

ಹೀಗೆ ಈ ಕಾಲ ಘಟ್ಟದ ಸಮಾಜಿಕ, ಸಾಂಸ್ಕೃತಿಕ, ರಾಜಕೀಯ, ಸಾಹಿತ್ಯಕ ಪರಿಸರ ಶಿಕ್ಷಣದ ಶೈಕ್ಷಣಿಕ ಚಿಂತನೆಗಳ ಮೇಳೆ ಬೀರಿದ ಪ್ರಭಾವ, ಪ್ರೇರಣೆ ಹಿನ್ನಲೆಯಾಗಿ ಈ ಭಾಗವನ್ನು ಲಕ್ಷಿಸಲಾಗಿದೆ.

## ಟಿಪ್ಪಣಿಗಳು

೧. ಡಾ. ಬಿ. ಕೆ. ಖಡಬಡಿ : ವಡ್ಡಾರಾಧನೆ ಸಂಶೋಧನಾತ್ಮಕ ಅಧ್ಯಯನ : ಪುಟ ಸಂಖ್ಯೆ – ೯೧

೨. ಅದೇ : ಪುಟ ಸಂಖ್ಯೆ – ೯೨

೩. ಅದೇ : ಪುಟ ಸಂಖ್ಯೆ – ೧೦೦

೪. ಅದೇ : ಪುಟ ಸಂಖ್ಯೆ – ೧೦೧

೫. ಸಂ. ಡಾ. ಅರವಿಂದ ಮಾಲಗತ್ತಿ : ಕನ್ನಡ ವಿಷಯ ವಿಶ್ವಕೋಶ : ಪುಟ ಸಂಖ್ಯೆ - ೧೦೭೪

೬. ಡಾ. ಬಿ. ಕೆ. ಖಡಬಡಿ : ವಡ್ಡಾರಾಧನೆ ಸಂಶೋಧನಾತ್ಮಕ ಅಧ್ಯಯನ : ಪುಟ ಸಂಖ್ಯೆ – ೯೬-೯೭

೭. ಅದೇ : ಪುಟ ಸಂಖ್ಯೆ – ೯೮

೮. ಅದೇ : ಪುಟ ಸಂಖ್ಯೆ – ೯೮

೯. ಪ್ರೊ॥ಕೆ. ನಾಗೇಂದ್ರ : ಸಂ. ದಿವಂಗತ. ಸೀತಾರಾಮಯ್ಯ : ವಡ್ಡಾರಾಧನೆ – ಕವಿ, ಕಾವ್ಯ ಪರಂಪರೆ : ಪುಟ ಸಂಖ್ಯೆ – ೪೧

೧೦. ಡಾ. ಬಿ. ಕೆ. ಖಡಬಡಿ : ವಡ್ಡಾರಾಧನೆ ಸಂಶೋಧನಾತ್ಮಕ ಅಧ್ಯಯನ : ಪುಟ ಸಂಖ್ಯೆ – ೯೩

೧೧. ಟಿ. ಕೇಶವ ಭಟ್ಟ : ಸಂ. ದಿವಂಗತ. ಸೀತಾರಾಮಯ್ಯ : ವಡ್ಡಾರಾಧನೆಯ ಅಧ್ಯಯನ: ಪುಟ ಸಂಖ್ಯೆ – ೪೭

೧೨. ಟಿ. ಕೇಶವ ಭಟ್ಟ : ಸಂ. ದಿವಂಗತ. ಸೀತಾರಾಮಯ್ಯ : ವಡ್ಡಾರಾಧನೆಯ ಅಧ್ಯಯನ: ಪುಟ ಸಂಖ್ಯೆ – ೪೯

# ಅಧ್ಯಾಯ – ೪

# ವಡ್ಡಾರಾಧನೆ ಶೈಕ್ಷಣಿಕ ಚಿಂತನೆಗಳು

## ೪.೧ ಶೈಕ್ಷಣಿಕ ಸನ್ನಿವೇಶಗಳು

ವಡ್ಡಾರಾಧನೆಯ ಪ್ರಾರಂಭದ ಕಥೆಯಾದ ಸುಕುಮಾರ ಸ್ವಾಮಿಯ ಕಥೆಯಿಂದ ಹಿಡಿದು 'ಗಜಕಮಾರನ ಕಥೆ', 'ಭದ್ರಬಾಹು ಬಟ್ಟಾರ ಕಥೆ', 'ಸಿರಿದಿಣ್ಣನೆಂಬ ಬಟ್ಟಾರರ ಕಥೆ', 'ವೃಷಭಸೇನ ಬಟ್ಟಾರರ ಕಥೆ', 'ಗುರುದತ್ತ ಬಟ್ಟಾರರ ಕಥೆ', ಚಾಣಾಕ್ಯರಿಸಿಯ ಕಥೆ'ಯಗಳಲ್ಲಿ ಶೈಕ್ಷಣಿಕ ಸನ್ನಿವೇಶಗಳನ್ನು ಕಾಣಬಹುದು.

'ಸುಕುಮಾರ ಸ್ವಾಮಿಯ ಕಥೆಯಲ್ಲಿ ಅತಿಬಳ ರಾಜ. ಅವನ ಮಂತ್ರಿ ಸೋಮಶರ್ಮ ಸ್ವಲ್ಪ ಕಾಲವಾದ ನಂತರ ಸೋಮ ಶರ್ಮ ನಿಧನ ಹೊಂದುತ್ತಾನೆ. ಕಾರಣ ಮಂತ್ರಿ ಸ್ಥಾನವನ್ನು ಕಲ್ಪಿಸಲು ಅವನ ಮಕ್ಕಳಾದ ಅಗ್ನಿಭೂತಿ ವಾಯುಭೂತಿಯನ್ನು ಅರಮನೆಗೆ ಕರೆದ ನೀವು ಏನೇನು ಕಲಿತ್ತಿದ್ದೀರಿ? ಎಂದು ಕೇಳಿದಾಗ ಅವರು ತಲೆ ತಗ್ಗಿಸಿದಾಗ ಇವರು ಮೂರ್ಖರು ಯಾವ ವಿದ್ಯೆಯನ್ನು ಅರಿಯರು, ಸಪ್ತವ್ಯಸನಗಳಿಗೆ ಬಲಿಯಾದವರು ಎಂದು ಸಭಿಕರು ಹೇಳಿದಾಗ, ಅರಸನು ಅವರನ್ನು ಅಲ್ಲಿಂದ ಓಡಿಸಿ ಅವರಿಗೆ ವಂಶದಿಂದ ಬಂದಿದ್ದ ಮಂತ್ರಿ ಪದವಿಯನ್ನು ಸಂಪತ್ತು ವೈಭವಗಳನ್ನು ಶಾಸ್ತ್ರಕೋವಿದನಾಗಿದ್ದ ಅವರ ದಾಯಾದಿಯೊಬ್ಬನಿಗೆ ಕೊಟ್ಟುಬಿಟ್ಟನು.

ಅಗ್ನಿಭೂತಿ - ವಾಯುಭೂತಿ ಮನೆಗೆ ಹಿಂತಿರುಗಿದರು ಅತಿಯಾದ ಉದ್ವೇಗಪಟ್ಟು ಹರಕು ಚಿಂದಿ ಬಟ್ಟೆಯಾದರೂ ಉಟ್ಟು ಭಿಕ್ಷೆ ಬೇಡಿಯಾದರೂ ಇನ್ನು ಮೇಲೆ ವಿದ್ಯಾಭ್ಯಾಸ ಮಾಡುತ್ತೇವೆಂದು ತಾಯಿಯಾದ ಕಾಶ್ಯಪಿಗೆ ಹೇಳಿದರು.

ಕಾಶ್ಯಪಿಯು ಹಾಗಾದರೆ ಮಕ್ಕಳೆ ಮಗಧದೇಶದ ರಾಜಗೃಹಕ್ಕೆ ಸುಬಲನೆಂಬುದು ರಾಜ. ಸುಪ್ರಭೆ ಅವನ ಹೆಂಡತಿ, ಅವನ ಮಂತ್ರಿ ಸೂರ್ಯಮಿತ್ರನು ನನ್ನ ಅಣ್ಣನಾಗಬೇಕು ಎಲ್ಲಾ ವಿದ್ಯೆಗಳನ್ನು ಆತನು ಬಲ್ಲವನಾಗಿರುವುದರಿಂದ ಅವನು ನಿಮಗೆ ವಿದ್ಯೆಯನ್ನು ಕಲಿಸಿ ಯೋಗ್ಯರನ್ನಾಗಿ ಮಾಡುತ್ತಾನೆ. ನನ್ನ ಅಣ್ಣನಿಗೆ ಒಂದು ಪತ್ರವನ್ನು ಬರೆದು ಕೊಡುತ್ತೇನೆ ನೀವು ನಿಮ್ಮ ಮಾವನ ಬಳಿಗೆ ಹೋಗಿ ಚನ್ನಾಗಿ ವ್ಯಾಸಂಗ ಮಾಡಿ ಎಂದು ಪತ್ರ ಬರೆದುಕೊಟ್ಟಳು. ಆವರು ಹಲವು ದಿನಗಳ ವರೆಗೆ ಪ್ರಯಾಣ ಮಾಡಿ ರಾಜಗೃಹಕ್ಕೆ ಬಂದು ಸೂರ್ಯಮಿತ್ರನ ಮನೆಯನ್ನು ಕಂಡು ಹಿಡಿದು ತಮ್ಮ ತಾಯಿಯ ಪತ್ರವನ್ನು ಅವನಿಗೆ ಕೊಟ್ಟರು. ಆಗ ಸೂರ್ಯಮಿತ್ರನು ನೀವುಯಾರು? ಎಲ್ಲಿಂದ ಬಂದಿದ್ದಿರಿ? ಯಾರ ಪತ್ರ ಎಂದು ಕೇಳಿದಾಗ "ನಾವು ಕೌಶಂಬಿಯಿಂದ ಬಂದಿದ್ದೇವೆ ನಿಮ್ಮ ತಂಗಿ ಕಾಶ್ಯಪಿ ಕಳುಹಿಸಿದ ಪತ್ರ" ಎಂದು ಅವರು ಹೇಳಿದರು. ಸೂರ್ಯಮಿತ್ರನು ಪತ್ರವನ್ನು ಓದಿದನು, ಸೋಮಶರ್ಮ ಸತ್ತು ಹೋಗಿರುವುದು, ಮಂತ್ರಿಪದವಿ ಸಪ್ತವ್ಯಸನಿಗಳಾದ ಈ ಮಕ್ಕಳಿಗೆ ಬರದೆ ದಾಯಾದಿಗಳ ಪಾಲಾದುದನ್ನು ತಿಳಿದು ದುಃಖಪಟ್ಟನು. ತನ್ನ ತಂಗಿಯ ಮಕ್ಕಳನ್ನು ಯೋಗ್ಯರನ್ನಾಗಿ ಮಾಡುವುದು ತನ್ನ ಕರ್ತವ್ಯವೆಂದು ಭಾವಿಸಿದನು. ತಾನು ನಿಜವಾಗಿ ಸೋದರಮಾವನೆಂದು ನಿಜ ಹೇಳಿದ್ದರೆ, ಇವರು ಕಷ್ಟಪಟ್ಟು ವಿದ್ಯೆ

ಕಲಿಯದೆ ಕೆಟ್ಟು ಹೋಗುತ್ತಾರೆ ಎಂದು ಭಾವಿಸಿ ಅಗ್ನಿಭೂತಿ - ವಾಯುಭೂತಿಗೆ ಈ ರೀತಿಯಾಗಿ ಹೇಳಿದನು ಮಕ್ಕಳೆ ನನ್ನ ಹೆಸರೂ ಸೂರ್ಯಮಿತ್ರ ನಿಜ, ಆದರೆ ನನಗೆ ಕಾಶ್ಯಪಿ ಎಂಬ ಹೆಸರಿನ ತಂಗಿಯಾಗಲಿ, ಸೋಮಶರ್ಮನೆಂಬ ಮೈದುನನಾಗಲಿ ಇಲ್ಲ, ನಾನು ನಿಮ್ಮ ಸೋದರ ಮಾಮನಾದ ಸೂರ್ಯಮಿತ್ರನಲ್ಲ. ಕಾರಣ ನೀವು ಯಾರಾದರೇನು, ವಿದ್ಯಾರ್ಥಿಗಳಾಗಿ ಓದು ಕಲಿಯುತ್ತೇನೆಂದು ಆಶೆಯಿಂದ ಬಂದಿರುವಿರಿ. ಭಿಕ್ಷೆಬೇಡಿ, ಹರಕು ಉಟ್ಟು, ಹಗಲಿರಳೂ ಆಲಿಸಿ ಕಟ್ಟುನಿಟ್ಟಾಗಿ ಓದುವಿರಾದರೇ ನಾನೇ ನಿಮಗೆ ವಿದ್ಯೆ ಕಲಿಸುತ್ತೇನೆ.

'ಅಗ್ನಿಭೂತಿ ವಾಯುಭೂತಿ ಇತನ ಮಾತು ಕೇಳಿ ಸಂತೋಷ ಪಟ್ಟು ಹಾಗೆ ಆಗಲಿ ನಿಮ್ಮ ದಯೆ' ಎಂದು ನಮಸ್ಕರಿಸಿದರು.

ಒಳ್ಳೆಯ ವಾರ ದಿವಸ ವಿದ್ಯಾನಕ್ಷತ್ರದಲ್ಲಿ ಅಗ್ನಿಭೂತಿ, ವಾಯುಭೂತಿಯರ ವ್ಯಾಸಂಗ ಪ್ರಾರಂಭವಾಯಿತು, ಸೂರ್ಯಮಿತ್ರರ ಹಗಲು ಇರಳೂ ಸತತವಾಗಿ ಕಟ್ಟುನಿಟ್ಟಿನ ನಿರ್ಬಂಧದಿಂದ ಅವರಿಗೆ ವ್ಯಾಸಂಗ ಮಾಡಿಸುತ್ತಾನೆ, ಇಬ್ಬರೂ ಏಳೆಂಟು ವರ್ಷ ಕಳೆಯುವುದರೊಳಗಾಗಿ "ನಾಲ್ಕುವೇದ, ಆರು ಅಂಗ, ಹದಿನೆಂಟು ಧರ್ಮಶಾಸ್ತ್ರ, ಮೀಮಾಂಸಾ, ನ್ಯಾಯ, ವ್ಯಾಕರಣ, ಪ್ರಮಾಣ, ಛಂದಸ್ಸು, ಅಲಂಕಾರ, ನಿಘಂಟು, ಕಾವ್ಯ, ನಾಟಕ, ಚಾಣಕ್ಯ ಸಾಮುದ್ರಿಕ, ಶಾಲಿಹೋತ್ರ, ಪಾಳಕಾಪ್ಯ. ಹಾನಿತ, ಚರಕ, ಅಶ್ವಿನಿಮತ, ಬಾಹುಲ, ಸುಶ್ರುತ, ಕ್ಷಾರಪಾನೀಯ, ನರವೈದ್ಯಗಳಲ್ಲೂ, ಜ್ಯೋತಿಷ, ಮಂತ್ರವಾದ"[೧] ಮುಂತಾದ ಸಮಸ್ತ ಶಾಸ್ತ್ರಗಳಲ್ಲಿಯೂ ಅವರು ವಿದ್ವಾಂಸರಾದರು ಯೋಗ್ಯರಾದರ, ಇಬ್ಬರಿಗೂ ಸಂತೋಷವಾಗಿ ಗುರುಗಳ ಕಾಲಿಗೆ ಬಿದ್ದು "ನಿಮ್ಮ ಅನುಗ್ರಹದಿಂದ ನಾವು ಎಲ್ಲಾ ಶಾಸ್ತ್ರಗಳನ್ನು ಕಲಿತು ಪಂಡಿತರಾದೆವು. ಇನ್ನು ನಮ್ಮ ಊರಿಗೆ ಹೋರಡುತ್ತೇವೆಂದಾಗ ಸೂರ್ಯಮಿತ್ರನು ಸಂತೋಷದಿಂದ ನಿಜವನ್ನು ಹೇಳಿ ಉಡಲು ತೊಡಲು ಬೇಕಾದ ಉಡುಗೊರೆಗಳನ್ನು ಕೊಟ್ಟು ಕಳುಹಿಸಿದನು.

ಇಬ್ಬರು ಕೌಶಾಂಬಿಗೆ ಬಂದು ತಾಯಿಗೆ ನಮಸ್ಕರಿಸಿ ತಾವು ವಿದ್ಯಾವಂತರಾಗಿರುವುದ ತಿಳಿಸಿದರು. ಆಮೇಲೆ ಒಂದು ಒಳ್ಳೆಯ ದಿನ ನೋಡಿ ಇಬ್ಬರೂ ಅರಮನೆಗೆ ಹೋಗಿ ಮಹಾರಾಜನನ್ನು ಕಂಡು ಶ್ಲೋಕಗಳನ್ನು ಹೇಳಿ ಅದನ್ನು ಪಾಂಡಿತ್ಯ ಪೂರ್ಣವಾಗಿ ವ್ಯಾಖ್ಯಾನಿಸಿ ತಮ್ಮ ವಿದ್ವತ್ತನ್ನು ಮೆರೆದರು. ಸಭೆಯಲ್ಲಿದ್ದ ಪಂಡಿತರೆಲ್ಲ ಇವರ ಅಸಾಧಾರಣ ವಿದ್ವತ್ತನ್ನು ಮುಕ್ತ ಕಂಠದಿಂದ ಹೊಗಳಿದರು, ರಾಜನು ಸಂತುಷ್ಟನಾಗಿ ಅವರಿಗೆ ಬರಬೇಕಾಗಿದ್ದ ಅಧಿಕಾರ ಪದವಿ ಎಲ್ಲವನ್ನು ಕೊಡಿಸಿದನು ಅಗ್ನಿಭೂತಿ - ವಾಯುಭೂತಿ ಸುಖವಾಗಿ ಬಾಳತೊಡಗಿದರು.

ಒಂದು ದಿನ ಸಂಜೆ ಸೂರ್ಯಮಿತ್ರನು ಸುಬಲ ಮಹಾರಾಜನು ಕೊಟ್ಟಿದ್ದ ಮಾಣಿಕ್ಯದುಂಗುರುವನ್ನು ಹಾಕಿಕೊಂಡು ತಿರುಗಾಡಿಕೊಂಡು ಬರಲು ಹೋಗಿದ್ದರು. ಮರುದಿನ ಸೂರ್ಯಮಿತ್ರನು ಸೂರ್ಯನಿಗೆ ಅರ್ಘ್ಯವನ್ನು ನೀಡುವ ಸಮಯದಲ್ಲಿ ನೀರಿನೊಂದಿಗೆ

ಉಂಗುರವು ಜಾರಿ ತಾವರೆಯೊಳಕ್ಕೆ ಬಿದ್ದು ಬಿಟ್ಟಿತು. ಸೂರ್ಯಮಿತ್ರನು ಕೈಬೆರಳು ನೋಡಿ ಉಂಗುರವನ್ನು ಕಾಣದೆ ಗಾಬರಿಯಾದನು. ದೂರದಲ್ಲಿದ ಸುಧರ್ಮರೆಂಬ ಆಚಾರ್ಯ ಬಳಿಗೆ ಹೋಗಿ ವಿಚಾರಿಸಿದಾಗ ದಿವ್ಯಜ್ಞಾನಿಗಳಾದ ಆಚಾರ್ಯರು ಆದಿತ್ಯನಿಗೆ ನೀರು ಎರೆಯುತ್ತಿದ್ದಾಗ ಜಾರಿ ತಾವರೆ ಹೂವಿನೊಳಗೆ ಬಿದ್ದಿದೆ. ನಾಳೆ ಸೂರ್ಯ ಹುಟ್ಟುವಾಗ ನೀರಿನಿಂದ ಮೇಲಕ್ಕೆ ಹೂವು ಕಾಣಿಸಿ ಕೊಂಡು ಅರಳಿದಾಗ ಉಂಗುರವನ್ನು ನೋಡಬಹುದು. ಸಂತೋಷಗೊಂಡ ಸೂರ್ಯಮಿತ್ರನು ಮಾರನೆಯ ಬೆಳಿಗ್ಗೆ ಬಂದು ನೋಡುವಾಗ ತಾವರೆ ಹೂವಿನಲ್ಲಿ ಉಂಗುರ ಕಾಣಿಸಿತು. ಅದನ್ನ ರಾಜನಿಗೆ ಒಪ್ಪಿಸಿದನು.

ಅರಮನೆಯಿಂದ ಹೊರಬಿದ್ದ ಸೂರ್ಯಮಿತ್ರನು ಲೋಕದ ಅತ್ಯಂತ ಸೂಕ್ಷ್ಮ ಆಂತರಿಕ ದೂರ ಪದಾರ್ಥಗಳಲ್ಲೆವನ್ನು ಕುಳಿತ ಕಡೆಯೇ ಅರಿಯಬಲ್ಲ ಆಸವಣನ ಜೋಯಿಸಶಕ್ತಿಯನ್ನು ನೋಡಿ ಆಶ್ಚರ್ಯಪಟ್ಟು ಏನಾದರೂ ಮಾಡಿ ಕಪಟ ವಿನಯವನ್ನು ತೋರಿ ಅವನಿಂದ ಆ ವಿದ್ಯೆಯನ್ನು ಕಲಿತೇ ಬಿಡಬೇಕು ಎಂದು ಸಂಕಲ್ಪಮಾಡಿದನು.

ಸುಧರ್ಮರ ಬಳಿಗೆ ಬಂದು 'ಭಟ್ಟರಾ ನಿಮ್ಮ ಬಳಿ ಜ್ಯೋತಿಷವನ್ನು ಕಲಿಯಬೇಕೆಂಬ ಆಸೆಯಾಗಿದೆ, ನನಗೆ ಹೇಳಿಕೊಡಬೇಕೆಂದನು. ಆಗ ಸುಧರ್ಮ ಈ ವಿದ್ಯೆ ಸವಣರಿಗೆ ಮಾತ್ರ ಎಂದಾಗ ದೀಕ್ಷೆಪಡೆದು ವಿದ್ಯೆ ಹೇಳಿಕೊಡಿ ಎಂದನು. ಶಿಷ್ಯನಿಗೆ ಗುರುಗಳು ಹೇಳಿದರು: ಎಲ್ಲಾದರೂ ಉಂಟೆ ! ನಮಸ್ಕಾರಗಳನ್ನು ಆಲೋಚನೆಗಳನ್ನು ನಿಯಮಗಳನ್ನು ಮೊದಲು ಕಲಿಯಬೇಕು, ಎಂದಾಗ ಅದನ್ನು ಸೂರ್ಯಮಿತ್ರ ಬೇಗ ಬೇಗ ಕಲಿತನು. ತ್ರಿಷಷ್ಟಿ ಶಲಾಕಾಪುರುಷರ ಚರಿತ್ರೆಗಳನ್ನು. ಆಚಾರ್ಯ ಆರಾಧನೆ ಮೊದಲಾದ ಚರಣ ಗ್ರಂಥಗಳನ್ನ ಲೋಗಣಿ ಸಂಗಾಣಿ ಮೊದಲಾದ ಕರಣ ಗ್ರಂಥಗಳನ್ನು ಕಲಿಯಬೇಕು ಎಂದು ಗುರು ಹೇಳಿದಾಗ ಸೂರ್ಯಮಿತ್ರನು ಪಂಡಿತನಾಗಿರುವುದರಿಂದ ಅದೆಲ್ಲವನ್ನು ಅನತಿಕಾಲದಲ್ಲೆ ಕಲಿತನು. ಇನ್ನಾದರೂ ಜ್ಯೋತಿಷ್ಯ ಹೇಳಿಕೊಡಿ ಎಂದಾಗ 'ಇನ್ನೊಂದೆ ಒಂದು ವಿಚಾರವಿದೆ ಅದು ದ್ರವ್ಯಾನುಯೋಗ ಅದನ್ನು ಕಲಿತೊಡನೆಯೇ ಜ್ಯೋತಿಷ್ಯವನ್ನು ಕಲಿಸಿಕೋಡುತ್ತೇನೆಂದನು. ಸೂರ್ಯಮಿತ್ರನು ಒಳ್ಳೆಯ ವಾರ ದಿನ ನಕ್ಷತ್ರ ಸುಮುಹೋರ್ತದಲ್ಲಿ ಸಿದ್ಧಾಂತನ್ನೆ ಮನದಟ್ಟು ಮಾಡಿಕೊಳ್ಳಲಾರಂಭಿಸಿದನು, ದ್ರವ್ಯಾನುಯೋಗವನ್ನು ಕೇಳುತ್ತ ಕೇಳುತ್ತ ಮಿಥ್ಯಾತ್ವ, ಇಂಗಿ, ಬಂಧ ಬಂಧಕಾರಣ, ಮೋಕ್ಷ ಮೋಕ್ಷಕಾರಣ – ಜೀವ ಅಜೀವ ವಿಚಾರ ಪುಣ್ಯ-ಪಾಪ, ಅಸ್ರವ - ಸುಂದರ, ನಿರ್ಜರ, ಬಂಧ, ಮೋಕ್ಷ. ಈ ರೀತಿಯಗಿ ನವಪದಾರ್ಥ ಪಂಚಅಸ್ತಿಕಾಯ ಷಡದ್ರವ್ಯ ಜೈನ ತತ್ವದ ವಿಚಾರಗಳೆಲ್ಲದರಲ್ಲೂ ಪೂರ್ಣ ನಂಬಿಕೆ ತಿಳುವಳಿಕೆ ಬಂದು. ಅಷ್ಟಮತ – ಅಷ್ಟಮಲ, ಮೂರು ಮೂಢ ಆರು ಅನಾಯತನ ಸೇವೆಗಳು. ೨೫ ದೋಷಗಳಿಂದ ದೂರವಾದ ಸಮ್ಯಕ್ತವನ್ನು ಸಂಪಾದಿಸಿದನು. ಗುರುಗಳಿಗೆ ವಂಚಿಸಿ ತಪಸ್ಸು ಮಾಡಿದ್ದಕ್ಕಾಗಿ ಪ್ರಾಯಶ್ಚಿತ್ತ ಪಡೆದು ಪರಮಾರ್ಥ ಯತಿಯಾಗಿ ೧೨ ವರ್ಷ ಕಾಲ ಗುರುಗಳೊಂದಿಗೆ ಇದ್ದು ತಪಸ್ಸು ಮಾಡಿ

ಆಚಾರ್ಯನಾದನು ಎಂಬ ಉಲ್ಲೇಖದಿಂದ ಕಠಿಣ ಪರಿಶ್ರಮ, ಶ್ರದ್ಧೆ ಇದ್ದರೆ ಎಂಥಾ ವಿದ್ಯೆಯನ್ನು ಸಂಪಾದಿಸುವುದಾಗಿದೆ ಎಂಬುದು ಅಧ್ಯಯನದಿಂದ ತಿಳಿದುಬರುತ್ತದೆ.

'ಅಣ್ಣಿಕಾ ಪುತ್ರನ ಕಥೆಯಲ್ಲಿ' ಅವಧಿಜ್ಞಾನಿಗಳಾಗಿದ್ದ ದಮನಸೂರಿಗಳ ಧರ್ಮ ಉಪದೇಶ ಕೇಳಿ ದೀಕ್ಷೆ ಪಡೆದು ಕಾಲಕ್ರಮದಲ್ಲಿ ದ್ವಾದಶಾಂಗ ಚತುರ್ದಶ ಪೂರ್ವವಾದ ಆಗಮಗಳೆಲ್ಲವನ್ನು ಕಲಿತು ಗುರುಗಳ ಅನುಮತಿಯೊಂದಿಗೆ ಏಕವಿಹಾರಿಯಾಗಿ ಧರ್ಮದ್ಯಾನದಿಂದ ಕೇವಲಿಯಾಗಿ ಅಣ್ಣಿಕಾಪುತ್ರಮುನಿ ಮೋಕ್ಷಕ್ಕೆ ಸಂದರು.

ಭದ್ರಭಾಹ ಭಟ್ಟಾರರ ಕಥೆಯಲ್ಲಿ ಹದಿನಾಲ್ಕು ಪೂರ್ವಗಮ ಗ್ರಂಥಗಳನ್ನು ಬಲ್ಲ ಶ್ರುತಕೇವಲಿಗಳಾದ ನಾಲ್ಕನೆಯ ಗೋವರ್ಧನರು ಉಜ್ಜಯಂತ ಪರ್ವತವನ್ನು ವಂದಿಸಲೆಂದು ಸಂಚರಿಸುತ್ತಿದ್ದಾಗ ಅಲ್ಲಿ ಆಟವಾಡುತ್ತಿದ್ದ ಭದ್ರಬಾಹು ಮಾಣಿಯನ್ನು ಕಂಡು, ಈತನು ತಮ್ಮ ಬಳಿಕ ಚತುರ್ದಶ ಆಗಮಗಳನ್ನು ಬಲ್ಲ ಮಹಾತ್ಮಾನಾಗುತ್ತಾನೆಂದು ತಿಳಿದು. ತಂದೆ-ತಾಯಿಗಳಾದ ಸೋಮಶರ್ಮ - ಸೋಮಶ್ರೀಯರ ಒಪ್ಪಿಗೆ ಪಡೆದು. ಗೋವರ್ಧನ ಭಟಾರರು ಭದ್ರಬಾಹುವನ್ನು ಕರೆದುಕೊಂಡು ಹೋಗಿ ಕೆಲವು ದಿವಸಗಳಲ್ಲೇ ವ್ಯಾಕರಣ, ಪ್ರಮಾಣ, ಛಂದಸ್ಸು, ಅಲಂಕಾರ, ನಿಘಂಟು, ಕಾವ್ಯ, ನಾಟಕ ಮೊದಲಾದ ಲೋಕದಲ್ಲಿರುವ ಎಲ್ಲಾ ಶಾಸ್ತ್ರಗಳನ್ನು ಕಲಿಸಿದರು.

'ಸಿರಿದಿಣ್ಣ ಭಟ್ಟಾರರ ಕಥೆ'ಯಲ್ಲಿ ಸಿರಿದಿಣ್ಣನು ವೈರಾಗ್ಯತಾಳಿ ವರಧರ್ಮರೆಂಬ ತಪಸ್ವಿಗಳ ಬಳಿ ದೀಕ್ಷೆ ಪಡೆದು ಹನ್ನೆರಡು ವರ್ಷ ಸಮಸ್ತ ಆಗಮಗಳನ್ನು ಕಲಿತು ತಪಸ್ಸು ಮಾಡಿದನು 'ಅಭಯ ಘೋಷರೆಂಬ ಮುನಿಯ ಕಥೆ'ಯಲ್ಲಿ ಅಭಯಘೋಷ ಮತ್ತು ಅಭಯ ಮತಿಯರು ಉಪ್ಪರಿಗೆ ಮೇಲೆ ಸುಖ-ವಿನೋದಗಳಿಂದ ಕಾಲ ಕಳೆಯುತ್ತ ಇರುವಾಗ ಚಂದ್ರಗ್ರಹಣದ ಪ್ರಯುಕ್ತ ವೈರಾಗ್ಯತಾಳಿ ಮಗನಾದ ಚಂಡ ವೇಗನಿಗೆ ರಾಜ್ಯಪಟ್ಟ ಕಟ್ಟಿ ನಂದರೆಂಬ ಆಚಾರ್ಯರ ಬಳಿಗೆ ಹನ್ನೆರಡು ವರ್ಷಗಳವರೆಗೆ ಆಗಮಗಳನ್ನು ಕಲಿತ ಗುರುಗಳ ಅನುಮತಿಪಡೆದು ತಪಸ್ಸಿನಿಂದ ಮೋಕ್ಷ ಪಡೆದರು.

ವಿದ್ಯುಚ್ಚೋರ ರಿಸಿಯ'ಕಥೆಯಲ್ಲಿ ಕಳ್ಳನಾದ ವಿದ್ಯುಚ್ಚೋರನಿಗೆ ಅರಸ ವಿಚಾರಿಸಿದಾಗ ಆಗ ವಿದ್ಯುಚ್ಚೋರನು ತನ್ನ ವೃತ್ತಾಂತವನ್ನು ಹೇಳುವಾಗ ಶೈಕ್ಷಣಿಕ ಸನ್ನಿವೇಶಗಳ ಉಲ್ಲೇಖವಿದೆ ಅದೆಂದರೆ 'ಈ ಜಂಬೂದ್ವೀಪದ ಭರತ ಕ್ಷೇತ್ರದ ತಿಲಕದಂತೆ ದಕ್ಷಿಣಾಪಥದಲ್ಲಿ ಅಭೀರವೆಂಬ ನಾಡು ಅಲ್ಲಿ ವರ್ಣೆಎಂಬ ನದಿಯ ದಡದಲ್ಲಿ ವೇಣಾತಟವೆಂಬ ಪಟ್ಟಣ. ರಮ್ಯವಾದ ನಗರವಿದ್ದು ಸ್ವರ್ಗವನ್ನೇ ಹೋಲುತ್ತಿದಂತ್ತೆ. ಅದನ್ನು ಆಳುತ್ತಿದ್ದ ಅರಸ ಜಿತಶತ್ರು ಆತನ ಮಹಾದೇವ ವಿಜಯ ಮತಿ ಅವರಿಬ್ಬರ ಮಗ ನಾನು ವಿದ್ಯುಚ್ಚೋರ. ಅದೇ ನಗರದ ಯಮಪಾಶನೆಂಬ ತಳವಾರ ಮತ್ತು ಅವನ ಹೆಂಡತಿ ನಿಜಗುಣ ದೇವತೆಯರಿಗೆ ಮಗ ಈತ ಯಮದಂಡ. ಇಬ್ಬರು ಸಮಾನ ವಯಸ್ಸಿನವರು. ಐದಾರು ವರ್ಷವಾಗಿದ್ದಾಗ ಸಿದ್ದಾರ್ಥರೆಂಬ ಉಪಾಧ್ಯಾಯರ ಬಳಿ ವ್ಯಾಸಂ

ಮಾಡಿದರು "ಏಳೆಂಟು ವರ್ಷದಲ್ಲಿ ವ್ಯಾಕರಣ, ಪ್ರಮಾಣ, ಛಂದ, ಅಲಂಕಾರ, ನಿಘಂಟು, ಕಾವ್ಯ ನಾಟಕ ಸಾಮುದ್ರಿಕ ವಾತ್ಸ್ಯಾಯನ ಶಾಲಿಹೋತ್ರ ಪಾಲಕಾಪ್ಯ ಚಾಣಕ್ಯ ವೈದ್ಯ"[೨] ಮೊದಲಾದ ಸಕಲ ವಿದ್ಯೆಗಳನ್ನು ಕಲಿತು ಯಮದಂಡನು ತಳವಾರನ ಮಗನಾಗಿರುವುದರಿಂದ ಕಳ್ಳರನ್ನು ಹಿಡಿಯುವುದನ್ನು ಹೇಳುವ ತಸ್ಕರ ಎಂಬ ವಿದ್ಯೆಯನ್ನು ಕಲಿತವು. ಕದಿಯುವ ಉಪಾಯಗಳನ್ನು ಕಲಿಸುವ ಕರಪಟ ಶಾಸ್ತ್ರವನ್ನು ಹೇಳುವ ಕಳ್ಳತನದ ವಿದ್ಯೆಯ ಬಗ್ಗೆ ವಿದ್ಯುಚ್ಚೋರ ಹೇಳಿದ ಪ್ರಸಂಗ ಉಲ್ಲೇಖವಾಗಿದೆ.

'ಗುರುದತ್ತ ಭಟ್ಟಾರರ ಕಥೆ'ಯಲ್ಲಿ ಗುರುದತ್ತನು ಏಳು ವರ್ಷವಾಗುವಷ್ಟರಲ್ಲೇ ಅರವತ್ತನಾಲ್ಕು ಕಲೆಗಳನ್ನು ಎಪ್ಪತ್ತೇರಡು ವಿಜ್ಞಾನಗಳನ್ನು ಒಂದೂ ಬಿಡದೆ ಕಲಿತು ಪಾರಂಗತನಾದನು. ಇದೆ ಕಥೆಯಲ್ಲಿ ಬರುವ ಚಿಂತಾಗತಿ ಮತ್ತು ಅಭಯ ಕುಮಾರ ಪ್ರಸಂಗವನ್ನು ಅವಲೋಕಿಸಿದಾಗ ಮಂತ್ರ ವಿದ್ಯೆಯನ್ನು ಸಂಪಾದಿಸುತ್ತಿದ್ದ ಚಿಂತಾಗತಿಗೆ ಮಂತ್ರವನ್ನು ಉಚ್ಚರಿಸುವಂತೆ ಕೇಳಿದಾಗ ಚಿಂತಾಗತಿ ಮಂತ್ರಹೇಳಿದಳು. ಅಭಯಕುಮಾರ ವ್ಯಾಕರಣದಲ್ಲಿ ಕುಶಲ. ಪ್ರಸ್ತಾರ ಹಾಕಿ ನೋಡಿದರೆ ಅವಳು ಹೇಳುತ್ತಿದ್ದ ಮಂತ್ರಗಳಲ್ಲಿ ಕೆಲವುಕಡೆ ಅಕ್ಷರಗಳ ಕೊರತೆಯಿದೆ, ಮತ್ತೆ ಕೆಲವು ಕಡೆ ಹೆಚ್ಚಾಗಿವೆ! ಇದು ತಿಳಿದ ಮೇಲೆ ಹೆಚ್ಚಾದ ಅಕ್ಷರಗಳನ್ನು ಕಳೆದು, ಕಡಿಮೆಯಾದ ಕಡೆ ಉಚಿತವಾಗಿ ಸೇರಿಸಿ ಮಂತ್ರವನ್ನು ಸರಿಮಾಡಿ ಮಂತ್ರ ಹೇಳಿಕೊಟ್ಟನು. ಚಿಂತಾಗತಿಯು ಸಂತೋಷಳಾಗಿ ಅಭಯಕುಮಾರನ ಉಪಕಾರ ಸ್ಮರಿಸಿದಳು. ಚಿಂತಾಗತಿಯು ಅಭಯಕುಮಾರನ ಉಪಕಾರ ಪ್ರತ್ಯುಪಕಾರಮಾಡಿ ಅವನ ತಾಯಿಯನ್ನು ತನ್ನ ವಿದ್ಯಾಬಲದಿಂದ ಪಟ್ಟಣಕ್ಕೆ ಕರೆತಂದು ಅರಮನೆಯಲ್ಲಿ ಸುಖವಾಗಿರಿಸಿದಳು.

'ಚಾಣಾಕ್ಯರಿಸಿಯ ಕಥೆ'ಯಲ್ಲಿ ಚಾಣಾಕ್ಯ ಬೆಳೆದು ದೊಡ್ಡವನಾದನು ನಾಲ್ಕು ವೇದಗಳು ಆರು ಅಂಗ, ಹದಿನೆಂಟು ಧರ್ಮಶಾಸ್ತ್ರಗಳು ಮೀಮಾಂಸಾ, ವ್ಯಕರಣ ಪ್ರಮಾಣ, ಛಂದ, ಅಲಂಕಾರ, ನಿಘಂಟು, ಕಾವ್ಯ, ನಾಟಕ, ಶಾಲಿಹೋತ್ರ, ವೈದ್ಯ, ಸಾಮುದ್ರಿಕ, ನೀತಿ ಶಾಸ್ತ್ರ - ಮೊದಲಾದ ವಿದ್ಯೆಗಳನ್ನು ಕಲಿತು. ಋಷಿಗಳ ಬಳಿ ಧರ್ಮವನ್ನು ಕೇಳಿ ಶ್ರಾವಕ ವ್ರತಗಳನ್ನು ಕೈಕೊಂಡು ಸಮ್ಯಕದೃಷ್ಟಿಯಾಗಿ ಶಕಟಾಳನ ಮಗಳು ಯಶೋಮತಿಯನ್ನು ಮದುವೆಯಾದನು.

ಒಂದು ದಿನ ಶೋಣಾ ನದಿಯ ತೀರದಲ್ಲಿ ಚಾಣಾಕ್ಯನ ಕಾಲಿಗೆ ಒಂದು ದರ್ಭೆಯ ಕುಡಿ ಚುಚ್ಚಿ ರಕ್ತ ಬಂದಿತು. ಆಗ ಚಾಣಾಕ್ಯನಿಗೆ ದರ್ಭೆಯ ಮೇಲೆ ಸಿಟ್ಟು ಬಂದು, ಅದನ್ನು ಬೇರುಸಹಿತ ಕಿತ್ತು ಸುಟ್ಟನು. ಇದನ್ನು ಕಂಡ ಸುಬಂಧು ಚಾಣಾಕ್ಯನ ಬಳಿ ಹೋಗಿ ತನ್ನ ವೃತ್ತಾಂತವೆನ್ನಾಲ್ಲ ಹೇಳಿಕೊಂಡ ತನ್ನ ಗುರಿ ಸಾಧಿತವಾಗಿ ವೈರಿಗಳನ್ನು ವಿಧ್ವಂಸನೆ ಮಾಡಲು ಸಾಧ್ಯವೆಂದು ಯೋಚಿಸಿ ಅಲ್ಲದೆ ಈ ಹಿಂದೆ ನೈಮಿತ್ರಕನು ಚಾಣಾಕ್ಯನ ಭವಿಷ್ಯನುಡಿದ ವಿಷಯವು ಅವನಿಗೆ ಗೊತ್ತಿತ್ತು. ತನಗೆ ಒಳ್ಳೆಯ ಮಿತ್ರ ದೊರೆತನೆಂದು ಸಂತೋಷಪಟ್ಟು. ಕಾರಣ ಚಾಣಾಕ್ಯನ

ಬುದ್ಧಿಯನ್ನು ಪರೀಕ್ಷಿಸಬೇಕೆಂದು ಒಂದು ದಿನ ಭಟ್ಟಮಂಟಪದಲ್ಲಿ ಈ ರೀತಿಯಾಗಿ ಶ್ಲೋಕವನ್ನು ಬರೆದು ಹೋದನು.

॥"ಶಕ್ಯಾ ಶಕ್ತಿಸಹಸ್ರೇಣ ನೀತಿಶಾಸ್ತ್ರ ವಿಶಾರದ್ಯೈಃ
ವ್ಯವಸಾಯ ದ್ವಿತೀಯೇನ ಕೃತ್ಸ್ನಾ ಜೇತುಂ ವಸುಂಧರಾ" ॥

(ರಾಜನೀತಿ ಶಾಸ್ತ್ರದಲ್ಲಿ ಪಾರಂಗತರಾದವರು ಸಾವಿರಾರು ಶಕ್ತಿಗಳುಳ್ಳವರು, ಉದ್ಯಮವನ್ನು ಎರಡನೆಯದಾಗಿ ಇಡೀ ಭೂಮಂಡಲವನ್ನು ಗೆಲ್ಲಲು ಶಕ್ತರಾಗುತ್ತಾರೆ)[೩]

ಮತ್ತೊಂದು ದಿನ ಅಲ್ಲಿಗೆ ಬಂದ ಚಾಣಾಕ್ಯನು ಈ ಶ್ಲೋಕವನ್ನು ನೋಡಿ ನೀತಿಶಾಸ್ತ್ರದ ಬಲ್ಮೆಇದ್ದಲ್ಲಿ ಎಂದು ಅದನ್ನು ಅಳಿಸಿ ಹೀಗೆಂದು ಬರೆದು ಹೋದನು.

॥ "ಶಕ್ಯಾಹ್ಯೇಕಶರೀರೇಣ ನೀತಿಶಾಸ್ತ್ರ ವಿಶಾರದ್ಯೈಃ
ವ್ಯವಸಾಯ ದ್ವಿತೀಯೇನ ಕೃತ್ಸ್ನಾ ಜೇತುಂ ವಸುಂಧರಾ"॥

(ರಾಜನೀತಿ ಶಾಸ್ತ್ರದಲ್ಲಿ ಪಾರಂಗತನಾದವನು ಉದ್ಯಮ ಶೀಲನಾದವನು ಏಕಾಂಗಿಯಾಗಿ ಭೂಮಂಡಲವನ್ನು ಗೆಲ್ಲಲು ಸಾದ್ಯ)"[೪]

ಇದನ್ನು ಸಂಬಂಧು ನೋಡಿ ಚಾಣಾಕ್ಯನಿಗೆ ಸಾಮರ್ಥ್ಯಕ್ಕೆ ತಕ್ಕ ಬುದ್ಧಿಯೂ ಇದೆ ಎಂದು ತನ್ನ ಮಗಳು ಚೋಳಂಗಿಯನ್ನು ಮದುವೆ ಮಾಡಿಕೊಟ್ಟನು. ಅದೇ ರೀತಿ ಚಾಣಾಕ್ಯನು ಅರಸ ಮಹಾಪದ್ಮನನ್ನು ಕಂಡು ಶ್ಲೋಕಗಳಿಂದ ಸ್ತುತಿಸಿ ಅರಸನ ಮನ್ನಣಗೆ ಪಾತ್ರನಾದನು ಎಂಬ ಉಲ್ಲೇಖಗಳಿವೆ

ಈ ರೀತಿಯಾಗಿ ವಡ್ಡಾರಾಧನೆಯ ಅನೇಕ ಕಥೆಗಳಲ್ಲಿ ಶೈಕ್ಷಣಿಕ ಸನ್ನಿವೇಶಗಳು ಕಂಡು ಬರುತ್ತವೆ.

ಕೆಲವು ಕಥೆಗಳಲ್ಲಿ ವಾಹನ ಸೌಕರ್ಯ ಪ್ರಸ್ತಾಪಗಳು ಸ್ವಾರಸ್ಯಕವಾಗಿವೆ. ಆಗಿನ ಕಾಲದಲ್ಲಿ ಎತ್ತಿನ ಬಂಡಿ (ಶಕಟ, ಚಕ್ಕಡಿ, ಗಾಡಿ) ಜನಸಾಮಾನ್ಯರ ಪ್ರಯಾಣಕ್ಕೆ ವರ್ತಕರ ಸರಕು ಸಾಗಿಸುವುದಕ್ಕೆ ಮುಖ್ಯವಾಹನ. ಪಲ್ಲಕ್ಕಿ ರಥ ಉನ್ನತದರ್ಜೆಯವರಿಗೆ ಮಿಸಲಾಗಿತ್ತು ಆನೆ ಕುದುರೆ ತಕ್ಕಮಟ್ಟಿಗೆ ವಾಹನ ಸೌಕರ್ಯಗಳಾಗಿದ್ದರೂ ಇವುಗಳನ್ನು ಅರಮನೆಗೆ, ಬೇಟೆಗೆ, ಮೃಗಯಾವಿಹಾರಕ್ಕೆ ಯುದ್ದಗಳಿಗೆ ಉಪಯೋಗಿಸುತ್ತಿದ್ದರು. ರಾಜರು ಗಜಪ್ರಿಯರು, ಗಜವಂಟೆಕಾರರು, ರಾಜಗಜಕ್ಕೆ ಹೆಸರುಗಳನ್ನು ಇಟ್ಟು ಅಲಂಕರಿಸುತ್ತಿದ್ದರು. ಮಲಯಾವತಿ ಪದ್ಮಾವತಿ ಮಲಯ ಸುಂದರ ಮುಂತಾದವರು ಪಳಗಿಸಿ ಶಿಕ್ಷಣವನ್ನು ಕೊಡುತ್ತಿದ್ದರು. ಮಾವಟಿನ (ಮಾವುತ) ಇರುತ್ತಿದ್ದ. ಆಗಿನ ಪ್ರಾಚೀನ ಕಾಲದಲ್ಲಿ ವಾಹನ ವ್ಯವಸ್ಥೆಯಲ್ಲಿ ರಥವೂ ಪ್ರಮುಖವಾಗಿತ್ತು. "ಇಂಥ ರಥವನ್ನು ವಿವಿಧ ರೀತಿಯಲ್ಲಿ ಅಲಂಕರಿಸುತ್ತಿದ್ದರು. ಅಂದರೆ ಕೊಡೆ, ಗಂಟೆ, ಕಿರುಗೆಜ್ಜೆ, ಧ್ವಜಾದಿಗಳಿಂದ ತೋರಣ ಕಟ್ಟಿ ಅಲಂಕರಿಸುತ್ತಿದ್ದರು. ರಥವನ್ನು ತಿನಿಸವೆಂಬ

ಮರದಿಂದ ತಯಾರಿಸುವ ವಾಡಿಕೆಇತ್ತು. ಅದರ ಅರಗಳು, ಧುರಾ (ನೊಗ) ಸುಭದ್ರವಾಗಿರುವಂತೆ ಅದರ ನೇಮಿಯನ್ನು ಕಬ್ಬಿಣದಿಂದ ತಯಾರಿಸಿ ಸುತ್ತು ಪಟ್ಟಿಯಾಗಿ ಕಟ್ಟುತ್ತಿದ್ದರು ನಿಷ್ಣಾತನಾದ ರಥದ ಬಾಣಗಳ ಬತ್ತಳಿಕೆ, ಕವಚ, ಬಿಲ್ಲು, ಕತ್ತಿ ಇತರ ಆಯುಧಗಳನ್ನು ತಯಾರಿಸುತ್ತಿದ್ದರು".[೫]

ಅಕ್ಕಸಾಲಿಗರು ಮತ್ತು ಮಾಣಿಕ್ಯ ಮತ್ತು ಹೊನ್ನಗಳಿಂದ ಅಂದವಾದ ಒಡವೆಗಳನ್ನು ತಯಾರಿಸುತ್ತಿದ್ದರು ಈ ರೀತಿಯಾಗಿ ಕರಕುಶಲ ಶಿಕ್ಷಣವು ಪ್ರಾಚೀನ ಕಾಲದಲ್ಲಿ ಅಷ್ಟೇ ಮಹತ್ವವನ್ನು ಪಡೆದಿತ್ತು.

## ೪.೨ ಗುರಿ – ಉದ್ದೇಶಗಳು

ವಡ್ಡಾರಾಧನೆಯಲ್ಲಿ ಜ್ಞಾನಾರ್ಜನೆಯ ಮಾಧ್ಯಮವಾಗುವಂತೆ ಮನಸ್ಸನ್ನು ಅಣಿಗೊಳಿಸುವುದೆ ಶಿಕ್ಷಣದ ಪ್ರಮುಖ ಉದ್ದೇಶವಾಗಿತ್ತು ಆದರೆ ಮನಸ್ಸನ ತುಂಬ ವಿಷಯಾಶ್ರಿತ ಜ್ಞಾನದ ಉಪಕರಣವನ್ನು ತುಂಬುವುದಲ್ಲ ವಸ್ತುವಿನೊಡನೆ ಉಂಟಾಗುವ ಸಂಪರ್ಕವೇ ಮನಸ್ಸಿನ ದುರ್ಬಲಗೊಳಿಸುತ್ತವೆ ವಸ್ತು ಸಂಪರ್ಕವನ್ನು ದೂರಮಾಡಿದಲ್ಲಿ ಹಾಗೂ ಸಂಪರ್ಕದೋಷಗಳಿಂದ ದೂರವಾಗಿದ್ದಲ್ಲಿ ಮನಸ್ಸು ಬಲಗೋಳಿಸುತ್ತದೆ ಎಂಬುದೇ ಶಿಕ್ಷಣದ ಉದ್ದೇಶ - ವಿಶ್ವತತ್ವದೊಡನೆ ಸತತವಾದ ಸಂಪರ್ಕವನ್ನು ಬೆಳೆಸಿಕೊಂಡು ಆದರ ಸಂಪರ್ಕದಿಂದ ಹೃದಯ ವಿಶಾಲಗೊಳಿಸಬೇಕು. ತನ್ನಲ್ಲಿ ಅಡಗಿಕೊಂಡಿರುವ ಹಾಗೂ ಮೌಲಿಕವಾಗಿರುವಂತಹ ಶಕ್ತಿಗಳನ್ನು ಸಾರ್ಥಕ ಪಡಿಸಿಕೊಳ್ಳುಲು ಮನಸ್ಸಿಗೆ ಸೂಕ್ತವಾದ ತರಬೇತಿ ಶಿಕ್ಷಣದಿಂದ ದೊರಕುವಂತಾಗಬೇಕು.

"ಹೃದಯದಲ್ಲಿ ಅಡಗಿರುವ ಜೀವಶಕ್ತಿ ವೃದ್ಧಿಗೊಳ್ಳುವಂತೆ ಮಾಡಿ ಆ ಶಕ್ತಿ ಕ್ರಿಯೋನ್ಮುಖವಾಗುವಂತೆ ಅವಕಾಶ ಮಾಡಿಕೊಳ್ಳಲು ಬ್ರಹ್ಮಚರ್ಯ ಮೊದಲನೆಯದು. ಈ ಅನುಷ್ಠಾನದ ಮೂಲಕ ಜೀವಾತ್ಮನಲ್ಲಿ ಅನಂತಶಕ್ತಿ, ದಿವ್ಯಶಕ್ತಿಯ ಅಕ್ಷಯ ಭಂಡಾರವನ್ನು ನಿರ್ಮಿಸಬೇಕು, ಈ ಪ್ರಭಾವನ್ನು ನಿರ್ಮಿಸುವುದೇ ಶಿಕ್ಷಣದ ಉದ್ದೇಶವಾಗಿತ್ತು".[೮]

ಬ್ರಾಹ್ಮಣರ ಪಾರಂಪರಿಕವಾದ ಶಿಕ್ಷಣ ವ್ಯವಸ್ಥೆ ಇತ್ತು, ಶಿಕ್ಷಣವು ಧರ್ಮ ಮತ್ತು ಸಂಪ್ರದಾಯದ ಆಶ್ರಯದಲ್ಲಿಯೇ ವ್ಯವಸ್ಥಗೊಂಡಿತು. ಜ್ಞಾನದ ಒಂದು ವಿಷಯವು ಅವರ ಒಂದು ಕಲ್ಪನೆಯನ್ನು ಅವಲಂಬಿಸಿತ್ತು, ಸರ್ವಶಕ್ತವಾದ ಪರಮಾತ್ಮನಲ್ಲಿ ಅಚಲವಾದ ನಂಬಿಕೆ ಇತ್ತು, ಪುನರಜನ್ಮ ಮತ್ತು ಕರ್ಮಸಿದ್ಧಾಂತದಲ್ಲಿ ನಂಬಿಕೆ ಇಟ್ಟಿದ್ದರು ಕರ್ಮ ಸಿದ್ಧಾಂತಕ್ಕೆ ಅನುಗುಣವಾಗಿ ಎಲ್ಲವೂ ನಡೆಯುತ್ತದೆ. ಎಂದು ನಂಬಿಕೆ ಐಹಿಕವಾದ ಸುಖವು ಕೇವಲ ಕ್ಷಣಿಕವಾದದ್ದು ನಶ್ವರವಾದ ಈ ಶರೀರಕ್ಕೆ ಮಹತ್ವಕೊಡದೇ ಶಾಶ್ವತ ಸುಖಕ್ಕಾಗಿ ಮಹತ್ವಕೊಟ್ಟು ಮೋಕ್ಷ ಪಡೆಯುವುದೇ ಪ್ರಮುಖ ಗುರಿಯಾಗಿತ್ತು. ಸತ್ಯವನ್ನು ಅರಿಯುವುದು ಆಧ್ಯಾತ್ಮಿಕ

ಜ್ಞಾನದ ಪರಿಚಯ ಮಾಡಿಕೊಟ್ಟು ಮುಕ್ತಿಯನ್ನು ಪಡೆಯುವುದು, ನಶ್ವರವಾದ ಜಗತ್ತಿನಿಂದ ಮನಸ್ಸನ್ನು ವಿಮುಖಗೊಳಿಸಿ ಶಾಶ್ವತವಾದ ಸತ್ಯದಲ್ಲಿ ಕೇಂದ್ರೀಕರಿಸುವುದು ಪ್ರಮುಖ ಉದ್ದೇಶವಾಗಿತ್ತು.

ಜ್ಞಾನ ಸಂಪಾದನೆ : ಜ್ಞಾನ ಸಂಪಾದನೆಗಾಗಿ ವೇದಗಳು, ಧರ್ಮಶಾಸ್ತ್ರ, ನ್ಯಾಯ, ವ್ಯಾಕರಣ, ಮೀಮಾಂಸಾ ಪ್ರಮಾಣ, ಛಂದಸ್ಸು, ಅಲಂಕಾರ ನಿಘಂಟು ಕಾವ್ಯನಾಟಕ ಚಾಣಾಕ್ಯ ಸಾಮುದ್ರಿಕ, ಶಾಲಿಹೋತ್ರ, ಪಾಲಿಕಾಪ್ಯ ಕ್ಷಾರಪಾಣಿ, ನರವೈದ್ಯ, ಜ್ಯೋತಿಷ್ಯ ಮಂತ್ರವಾದ ಮುಂತಾದ ಸಮಸ್ತ ಶಾಸ್ತ್ರಗಳ ೭೨ ಕಲೆಯ ವಿಧಾನಗಳ ಶಿಕ್ಷಣದ ಮುಖಾಂತರ ಲೌಕಿಕ ಮತ್ತು ಆಧ್ಯಾತ್ಮಿಕ ವಿಷಯಗಳೊಂದಿಗೆ ಜ್ಞಾನವನ್ನು ಸಂಗ್ರಹಿಸುತ್ತಿದ್ದರು. ಇದು ಪ್ರಮುಖವಾದ ಗುರಿಯಾಗಿದ್ದು ಈ ಹಲವಾರು ವಿಷಯಗಳ ಅಧ್ಯಯನದ ಮೂಲಕ ನಿರ್ಣಯ ಶಕ್ತಿ ತಾರ್ಕಿಕ ಶಕ್ತಿ, ಅಭಿವ್ಯಕ್ತಿ ಶಕ್ತಿ, ಗ್ರಹಣ ಶಕ್ತಿ ಮೊದಲಾದವುಗಳ ವಿಕಾಸವಾಗುತ್ತಿತ್ತು.

ವ್ಯಕ್ತಿತ್ವದ ವಿಕಾಸವಾಗಬೇಕು ವ್ಯಕ್ತಿಯ ಸರ್ವಾಂಗೀಣ ಬೆಳವಣಿಗೆ ಆಗಬೇಕು ಸದೃಢವಾದ ದೇಹದಲ್ಲಿ ಸದೃಡವಾದ ಮನಸ್ಸು ನಿರ್ಮಿಸಲು ದೈಹಿಕ ಸಂವರ್ಧನೆಗಾಗಿ ಯೋಗಾಸನ ಕ್ರಮಬದ್ಧವಾಗಿ ಬೋಧಿಸುವುದರ ಮೂಲಕ ವ್ಯಕ್ತಿತ್ವ ವಿಕಾಸ ಮಾಡುವುದು ಗುರಿಯಾಗಿತ್ತು.

ಶಿಕ್ಷಣದ ಮತ್ತೊಂದು ಗುರಿ ಒಳ್ಳೆಯ ಚಾರಿತ್ರ್ಯ ನಿರ್ಮಾಣ ಮಾಡುವುದು, ಉತ್ತಮವಾದ ನಡವಳಿಕೆ, ನಿರ್ಮಲವಾದ ಮನಸ್ಸು, ನಿಯಂತ್ರಣ ಮುಂತಾದ ಉತ್ತಮ ಅಂಶಗಳಿಂದ ವ್ಯಕ್ತಿ ಸಮಾಜದಲ್ಲಿ ಮಾನ್ಯನಾಗುತ್ತಾನೆ, ಉತ್ತಮವಾದ ಚಾರಿತ್ರ್ಯದಿಂದ ಧೈರ್ಯ, ಸಾಮರ್ಥ್ಯ, ನೈತಿಕಬಲ ಸಾಮಾಜಿಕ ಮತ್ತು ಸಾಂಸ್ಕøತಿಕ ಸದ್ಗುಣಗಳನ್ನು ಬೆಳೆಸಲು ಸಹಾಯವಾಗುತ್ತದೆ. 'ಸುಕುಮಾರಸ್ವಾಮಿಯ ಕಥೆ'ಯಲ್ಲಿ ಅಗ್ನಿಭೂತಿ ಮತ್ತು ವಾಯುಭೂತಿಯ ಸೂರ್ಯಮಿತ್ರ ಗುರಿಗಳಲ್ಲಿ ಸಮಸ್ತ ಶಾಸ್ತ್ರಗಳಲ್ಲಿ ವಿದ್ವಾಂಸರಾಗಿ ಸಪ್ತ ವ್ಯಸನಗಳಿಂದ ಮುಕ್ತರಾಗಿ ಉತ್ತಮ ಚಾರಿತ್ರ್ಯವನ್ನು ಅಳವಡಿಸಿಕೊಂಡು, ಸಮಾಜಿಕ ಪರಿಸ್ಥಿತಿಗೆ ಅನುಸಾರವಾಗಿ ವ್ಯಕ್ತಿ ತನ್ನ ಹಕ್ಕು ಕರ್ತವ್ಯಗಳನ್ನು ಅರಿತು ಪ್ರಜ್ಞೆಹೊಂದಿ ಇತರರಿಗೆ ಕೆಡಕನ್ನು ಬಯಸದೆ ಜೀವಿಸುವುದೆ ಶಿಕ್ಷಣದ ಗುರಿಯಾಗಿತ್ತು, ಸತ್ಯ, ಅಹಿಂಸೆ, ಧರ್ಮ, ನ್ಯಾಯ ನೀತಿ ಮುಂತಾದ ಪಂಚಶೀಲ ತತ್ವಗಳನ್ನು ಅನುಸರಿಸುವುದು ವಿದ್ಯಾರ್ಥಿಗಳು ತಮ್ಮ ಹಿಂದಿನ ತಲೆಮಾರಿನಿಂದ ಬಂದ ಸಂಸ್ಕøತಿ ಸಾಹಿತ್ಯ ಉತ್ತಮ ಅಂಶಗಳ ಬಗ್ಗೆ ಪ್ರಜ್ಞೆ ಅಭಿಮಾನ ಬೆಳಸಿಕೊಂಡು ತಮ್ಮಿಂದ ಹೊಸಕೊಡುಗೆಯನ್ನು ನೀಡುವಂತೆ ಶಿಕ್ಷಣ ನೀಡಲಾಗುತ್ತಿತ್ತು.

ಧಾರ್ಮಿಕ ಭಾವನೆ, ಧರ್ಮನಿಷ್ಠೆ ಮೋಕ್ಷಸಾಧನೆ ಶಿಕ್ಷಣದ ಇನ್ನೊಂದು ಗುರಿಯಾಗಿತ್ತು, ಧರ್ಮೋರಕ್ಷಿತೋಧರ್ಮ ಒಳ್ಳೆಯ ಆಚರಣೆಯೇ ಧರ್ಮ, ಸತ್ಯಂ ವದ ಧರ್ಮಂ ಚರ

ಸತ್ಯದಂತೆ ನುಡಿ ಧರ್ಮದಂತೆ ನಡೆ, ವ್ಯಕ್ತಿಗಳಿಗೆ ಸತ್ಯದ ಬಗ್ಗೆ ಧರ್ಮ, ನ್ಯಾಯ, ಅನ್ಯಾಯ ತಿಳಿಸುವುದು - ಮೋಕ್ಷ ಸಂಪಾದಿಸುವುದು ಪ್ರಮುಖ ಶಿಕ್ಷಣದ ಗುರಿಯಾಗಿತ್ತು.

ಕಾರಣ ವಡ್ಡರಾಧನೆಯಲ್ಲಿ ಬರುವ ಮಹಾಪುರುಷರ ಕಥೆಗಳು ಈ ಕಥಾನಾಯಕರನ್ನು ಪುರುಷಸಿಂಹಗಳೆಂದು ಕರೆಯಲಾಗಿದೆ. ಈ ಮಹಾಪುರುಷರು ತಮ್ಮ ಪೂರ್ವಭವಗಳಲ್ಲೆ ಎಲ್ಲ ಜೀವರಂತೆ ಕೆಲಮೊಮ್ಮೆ ಸಾಮಾನ್ಯ ಜೀವರಿಗಿಂತಲೂ ನಿಕೃಷ್ಟರಾಗಿ ಜೀವಿಸಿದವರು. ಆದರೆ ಕೆಲವೊಂದು ಸನ್ನಿವೇಶದ ಪ್ರಭಾವದಿಂದ ತಮ್ಮ ಜೀವನ ಸೊತ್ರದ ದಿಕ್ಕನ್ನು ಮಾರ್ಪಾಡಿಸಿಕೊಂಡು ಅವರು ಅತಿಕಠಿಣವಾದ ತಪಸ್ವಿ ಜೀವನಕ್ಕೆ ಅಡಿಯಿಟ್ಟು ಗುರುಸೇವೆಯಿಂದ ವಿದ್ಯಾವ್ಯಾಸಂಗದಿಂದ ಧರ್ಮವೀರರಾಗಿ ವರ್ತಿಸುತ್ತಾರೆ. ತಮ್ಮ ತಪಸ್ಸಿನ ಫಲವಾಗಿ ಅವರಿಗೆ ದೇವತೆಗಳಿಂದ ಮನುಷ್ಯರಿಂದ ತಿರ್ಯಕ್ಕುಗಳಿಂದ, ಅಚೇತನಗಳಿಂದ ಈ ರೀತಿಯಾಗಿ ಬರತಕ್ಕ ನಾಲ್ಕು ಉಪವರ್ಗಗಳನ್ನು ಧೀರವೃತ್ತಿಯಿಂದ ಸಹಿಸಿ, ಇಪ್ಪತ್ತೇರಡು ಬಗೆಯ ಪರೀಷಹ (ತೊಂದರೆ)ಗಳನ್ನು ಅವರ ಸಹಿಸಿ ಪಂಚೇಂದ್ರಿಗಳನ್ನು ಬಯಸಿ, ಬಾಹ್ಯಸಂಗ್ರಹಗಳಾದ ಧನ-ಧಾನ್ಯಾದಿಗಳಲ್ಲಿ ಅನಾಸಕ್ತರಾಗಿ ಅಭ್ಯಂತರ ಪರಿಗ್ರಹಗಳಾದ ಮಿಥ್ಯಾತ್ವ ಕ್ರೋಧಾದಿಗಳನ್ನು ತ್ಯಜಿಸುತ್ತಾರೆ. ಹನ್ನೆರಡು ವಿಧವಾದ ತಪಸ್ಸನ್ನು ಆಚರಿಸಿ ಪ್ರಯೋಪಗಮನದಿಂದ ರೋಗಕ್ಕೆ ಚಿಕಿತ್ಸೆ ಮಾಡದೆ ಜ್ಞಾನಾವರಣೀಯ ದರ್ಶನಾವರಣೀಯ ಅಂತರಾಯ ಮೋಹನೀಯ ಎಂಬ ನಾಲ್ಕು ಘಾತಿಕರ್ಮಗಳನ್ನು ಆಯು, ನಾಮ, ಗೋತ್ರ, ವೇದನೀಯ ಎಂಬ ನಾಲ್ಕು ಅಘಾತಿಕರ್ಮಗಳನ್ನು ಬಯಸಿ ಇಂಥಹ ಸ್ವಯಂ ಸ್ವೀಕೃತ ಕಷ್ಟಗಳನ್ನು ಸಾಧನೆಯಿಂದ ಮೋಕ್ಷಕ್ಕೆ ಮೊದಲಿನ ಜನ್ಮವೆನಿಸಿದ 'ಸರ್ವಾರ್ಥಸಿದ್ಧಿ'ಎಂಬ ದಿವ್ಯ ಪದವಿ ಪಡೆದು ಮಹಾಪುರುಷರೇನಿಸುತ್ತಾರೆ ಇವು ಶಿಕ್ಷಣದ ಪ್ರಮುಖ ಗುರಿ ಉದ್ದೇಶಗಳಾಗಿದ್ದವು.

### ೪.೩ ಗುರುಶಿಷ್ಯರ ಸಂಬಂಧ:

ವಡ್ಡಾರಾಧನೆ – ಕಥೆಗಳಲ್ಲಿ ಗುರುಶಿಷ್ಯ ಸಂಬಂಧ ಛಾತ್ರವೃತ್ತಿ ಈ ಬಗ್ಗೆ ಅನೇಕ ವಿವರಗಳಿವೆ. ವಿದ್ಯಾರ್ಥಿಗಳಿಗೆ ತಮ್ಮ ವ್ಯಕ್ತಿತ್ವ ರೂಢಿಸಿಕೊಳ್ಳಲು ಗುರುಗಳಿಂದ ಶ್ರೇಷ್ಠವಾದ ಬೋಧನೆ ನಡೆಯುತ್ತಿತ್ತು ಚಾರಿತ್ರ್ಯ ಸಂವರ್ಧನೆಗೆ ಮಹತ್ವವಿತ್ತು. ವಿದ್ಯಾರ್ಥಿಗಳ ಚಾರಿತ್ರ್ಯ ರೂಪಿಸುವಲ್ಲಿ ಗುರುವು ಪ್ರಮುಖ ಕಾರಣನಾಗುತ್ತಿದ್ದನು. ಪ್ರಾಚೀನ ಪರಂಪರೆಯ ಪರಿಚಯ ಸಂಸ್ಕೃತಿಯನ್ನು ಹೊಣೆಗಾರಿಕೆಯಿಂದ ಯಾವ ರೀತಿಯಾಗಿ ರಕ್ಷಿಸಬೇಕು. ಒಬ್ಬ ಪ್ರಜೆಯಾಗಿ ಸಾಮಾಜಿಕ ಜೀವನದಲ್ಲಿ ತನ್ನ ಪಾತ್ರವನ್ನು ಆಡುವಾಗ ಗುರುಹಿರಿಯರಿಗೆ ಯಾವ ರೀತಿಯಾಗಿ ವರ್ತಿಸಬೇಕು. ಕೌಟುಂಬಿಕ ವಾಗಿ ತನ್ನ ಕರ್ತವ್ಯಗಳೇನು. ಧಾರ್ಮಿಕವಾದ ಕರ್ತವ್ಯ

ನಿರ್ವಹಣೆಯನ್ನು ಯಾವ ರೀತಿಯಾಗಿ ನಿರ್ವಹಿಸಬೇಕು – ಇತ್ಯಾದಿಗಳಿಗೆ ಪೂರಕವಾದ ವಿದ್ಯಾಭ್ಯಾಸವನ್ನು ಹೇಳಿಕೊಡಲಾಗುತ್ತಿತ್ತು ಗುರು-ಶಿಷ್ಯರ ಸಂಬಂಧ ಸುಮುಖವು ಸುಮದುರವು. ತಂದೆ - ಮಕ್ಕಳಂತೆ ಅನೂನ್ಯವಾಗಿತ್ತು. ತಂದೆ ಯಾವರೀತಿಯಾಗಿ ಜವಾಬ್ದಾರಿಯಾಗಿ ಮಕ್ಕಳನ್ನು ಪೋಷಿಸುತ್ತಿದ್ದನೂ. ಹಾಗೆಯೇ ಗುರುವಾದವನೋ ತನ್ನ ಶಿಷ್ಯನ ವ್ಯಕ್ತಿತ್ವ ರೂಪಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದನು. ಶಿಷ್ಯನ ವ್ಯಕ್ತಿತ್ವ ರೂಪಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತಿದ್ದನು. ಶಿಷ್ಯನ ವ್ಯಕ್ತಿತ್ವಕ್ಕೆ ಗುರುವೇ ಕಾರಣನಾಗುತ್ತಿದ್ದನು. ಶಿಷ್ಯ-ಗುರುಗಳಲ್ಲಿ ಭಯಭಕ್ತಿಗಳಿಂದ ನಡೆದುಕೊಳ್ಳುತ್ತಿದ್ದರು. ಸೂರ್ಯಮಿತ್ರಾಚಾರ್ಯರು ಭಿಕ್ಷೆಗಾಗಿ ಅಗ್ನಿಭೂತಿಗೆ ಮನೆಗೆ ಬಂದಾಗ ಅವರನ್ನು ಕಂಡಕೂಡಲೇ ಅಗ್ನಿಭೂತಿಗೆ ತುಂಬ ಸಂತೋಷವಾಯಿತು. ಅತ್ಯಂತ ಭಕ್ತಿಯಿಂದ ವ್ಯವಸ್ಥೆಮಾಡಿ ಕಾಲನ್ನು ತೊಳೆದು 'ಉನ್ನತ ಆಸನದಲ್ಲಿ ಕುಳ್ಳಿರಿ ಎಂದು ನುಡಿದು ಒಂಬತ್ತು ವಿವಿಧ ಸತ್ಕಾರಗಳಿಂದ ಪುಣ್ಯವನ್ನು ಪಡೆದು. ಶ್ರದ್ಧೆ ಭಕ್ತಿ ಮುಂತಾದ ಏಳುಗುಣಗಳಿಂದ ಕೂಡಿದವನಾಗಿ ಪರಿಶುದ್ಧವಾದ ಆಹಾರವನ್ನು ಅತ್ಯಂತ ಭಕ್ತಿಯಿಂದ ಬಡಿಸಿದನು. ಹರ್ಷಿತರಾದ ಸೂರ್ಯಮಿತ್ರ ಆಚಾರ್ಯರು 'ದಾನ ಅಕ್ಷಯವಾಗಲಿ'ಎಂದು ಆಶೀರ್ವದಿಸಿದರು. ಅವರು ಹೋಗುವಾಗ ಅಗ್ನಿಭೂತಿ – "ಪೂಜ್ಯರೇ ನಿಮ್ಮ ಕಿರಿಯ ಶಿಷ್ಯನನ್ನು ಹರಿಸಿ ಹೋಗಿರಿ" ಎಂದು ನುಡಿದು ಅವರನ್ನು ವಾಯುಭೂತಿ ಮನೆಗೆ ಕರೆದುಕೊಂಡು ಹೋದನು.

ಆ ಸಮಯದಲ್ಲಿ ವಾಯುಭೂತಿ ಲೋಹಾಸದ ಮೇಲೆ ಕುಳಿತು ಅನೇಕ ಶಿಷ್ಯರಿಗೆ - ಬ್ರಾಹ್ಮಣರಿಗೆ ವ್ಯಾಖ್ಯಾನ ಮಾಡುತ್ತಿದ್ದನು. ಇವರಿಗೆ ಗೌರವಿಸದೇ ಮೇಲಕ್ಕೆ ಏಳಲು ಇಲ್ಲ. ಕಾಲಿಗೆ ಎರಗದೆ. ನಿಷ್ಠುರವಾದ ಮಾತುಗಳನ್ನು ಆಡಿದನು. ಮುಂದೆ ತನ್ನ ತಪ್ಪಿಗೆ ಪ್ರಾಯಶ್ಚಿತ ಪಡೆದು ತಪಸ್ಸು ಮಾಡಿ ಮೋಕ್ಷ ಹೊಂದಿದನು. ಈ ರೀತಿಯಾಗಿ ತನ್ನ ಗುರುವನ್ನು ತಾತ್ಸಾರದಿಂದ ಕಂಡು ನಿಂದಿಸಿದ ದೃಷ್ಟಾಂತವು ವಿಶಿಷ್ಟವಾಗಿದೆ. ಶಿಷ್ಯರು ಪ್ರೀತಿಯಿಂದ ವಿದ್ಯೆ ಕಲಿಯಬೇಕಿತ್ತು. ಭಿಕ್ಷಾಟನೆ ಮಾಡಿ ಹಗಲೂ ಇರಳೂ ಆಲಸ್ಯರಾಗದೇ ನಿಯಮಕ್ಕೆ ಅನುಸಾರವಾಗಿ ಶ್ರದ್ಧೆಯಿಂದ ಕಲಿಯಬೇಕಿತ್ತು.

ಸಮಾಜದಲ್ಲಿ ಗುರುಗಳಿಗೆ ಗೌರವ ಸ್ಥಾನವಿತ್ತು. ಬಹುವಾಗಿ ರಾಜರಿಂದ ಪ್ರಜೆಗಳವರೆಗೂ ಗುರುವನ್ನು ಗೌರವದಿಂದ ಕಾಣಲಾಗುತ್ತಿತ್ತು ಲೋಕದೊಳ ಮರಮನೆಯೊಳಂ ಪೂಜ್ಯರಾಗಿ ಮನ್ನಣೆ ಪಡೆಯುತ್ತಿದ್ದರು. ಧರ್ಮಾಚಾರ್ಯರೇ (ಧಮ್ಮಾರಿಯ) ಅಲ್ಲದೆ ಶಿಲ್ಪಾಚಾರ್ಯ (ಶಿಪ್ಪಾಯರಿಯ) ಕಲಾಚಾರ್ಯ (ಕೂಯರಿಯ) ಬೇರೆ ಇರುತ್ತಿದ್ದರು. ಗುರು ತನ್ನ ಸ್ಥಾನಮಾನ ರಕ್ಷಣೆಗೆ ಬೇಕಾದ ವಿದ್ವತ್ತು. ವ್ಯಕ್ತಿತ್ವ ವರ್ಚಸ್ಸು, ಶೀಲ, ವಿನಯ ಮುಂತಾದವುಗಳನ್ನು ಪಡೆಯಬೇಕಾಗಿತ್ತು. ತನಗೆ ತಿಳಿದ ಜ್ಞಾನವನ್ನು ಯಾವ ಸ್ವಾರ್ಥಭಾವನೆ

ಇಟ್ಟುಕೊಳ್ಳದೇ ಶಿಷ್ಯನಿಗೆ ಹೇಳಬೇಕಾಗುತ್ತಿತ್ತು. ವಿದ್ಯಾರ್ಥಿಗಳ ಪ್ರಶ್ನಗೆ ಉತ್ತರಿಸುವ ಸಾಮರ್ಥ್ಯ ಪಡೆದಿರಬೇಕಿತ್ತು. ಗುರು-ಶಿಷ್ಯರ ಅಂತರ ವಿರದೆ ವಿಶ್ವಾಸ ತೋರಬೇಕಿತ್ತು.

ಬ್ರಹ್ಮಚರ್ಯವನ್ನು ಪರಿಪಾಲಿಸುತ್ತ ಗುರುವಿನಲ್ಲಿ ಶಿಷ್ಯವೃತ್ತಿಯನ್ನವಲಂಬಿಸಿ ಒಬ್ಬ ಅಭ್ಯಾಸಿಯಂತೆ ಗುರುವಿನ ಶುಶ್ರೋಷೆ ಮಾಡಿಕೊಂಡು ವಿದ್ಯಾರ್ಜನೆಯನ್ನು ಮಾಡುವ ಕಾಲವು ತಪಃಚರ್ಯಯಂತೆ ಬಹಳ ಕಠಿಣವಾಗಿತ್ತು ಗುರುವಿನ ಮನೆಯಲ್ಲಿ ಕೆಲಸಕಾರ್ಯಗಳನ್ನು ನಿರ್ವಹಿಸುವ ಜೊತೆಗೆ ಭಿಕ್ಷಾಟನೆ ಮಾಡಬೇಕಿತ್ತು. 'ಸುಕುಮಾರ ಸ್ವಾಮಿಯ ಕಥೆ'ಯಲ್ಲಿ ಅಗ್ನಿಭೂತಿ ವಾಯುಭೂತಿ ಇಬ್ಬರು ಅಣ್ಣತಮ್ಮಂದಿರು ಪ್ರತಿದಿನ ಭಿಕ್ಷಾಟನೆ ಮಾಡಿ ಗುರುವಿನ ಆಜ್ಞೆಯನ್ನು ಶಿರಸಾವಹಿಸಿ ಪಾಲಿಸುತ್ತಿದ್ದರು ಎಂಬ ಉಲ್ಲೇಖವಿದೆ, ಇವು ಶಿಷ್ಯನ ಪಾಲಿನ ಕೈಂಕರ್ಯವಾಗಿದ್ದವು. ಗುರುವಿನ ರಕ್ಷಣೆಯ ಜವಾಬ್ದಾರಿಯೂ ಶಿಷ್ಯನ ಪಾಲಿಗೆ ಸೇರಿದುದ್ದಾಗಿತ್ತು.

ಗುರು ತನ್ನ ಬಿನ್ನಣಮಂ ನೆರೆದ ನೆರವಿಗೆ ಮೆಜ್ಯಲ್ವೇಡಿ ಒಳಗೆ ಹೊರಗೆ ಸಂದರ್ಭವಶದಿಂದ ವಿದ್ವತ್ತಿನ ಪ್ರದರ್ಶನ ಮಾಡಬೇಕಿತ್ತು. ಪಲಂಬರ್ ಪಂಡಿತರ್ಕ್ಕೊದುಗಳಂ ವಕ್ಖಾಣಿಸುತ್ತಂ ಇರಬಹುದಿತ್ತು. ಏಕೆಂದರೆ ಗುರುವಾದವನು ತಮಂಧದಿಂದ ಜ್ಯೋತಿಯಡೆಗೆ ಕರೆದೊಯ್ಯ ಬಲ್ಲವನಾದುದರಿಂದ ನೈತಿಕ ಚಾರಿತ್ರ್ಯವಂತನಾಗಿದ್ದು ಆಳವಾದ ವಿಷಯದ ಬಗ್ಗೆ ಜ್ಞಾನನ್ನು ಹೊಂದಿರಬೇಕಿತ್ತು. ವಿದ್ಯಾರ್ಥಿಗಳಿಗೆ ಆಧ್ಯಾತ್ಮಿಕ ತಂದೆಯಾಗಿದ್ದು. ನೈತಿಕ ಪಾಠದ ಮೂಲಕ ನೈತಿಕ ವಿಕಾಸವನ್ನುಂಟು ಮಾಡುವುದು. ವಿದ್ಯಾರ್ಥಿಗಳಿಗೆ ಮಾರ್ಗದರ್ಶಿಯಾಗಿ ತತ್ವಜ್ಞಾನಿಯಾಗಿ ಮಾದರಿಯಾಗಿ ಇರಬೇಕಿತ್ತು. ತನ್ನ ವಿದ್ಯಾರ್ಥಿಗಳ ಬೌದ್ಧಿಕ, ಮಾನಸಿಕ, ಆತ್ಮನಿಯಂತ್ರಣ, ಆತ್ಮ ಸಾಕ್ಷಾತ್ಕಾರವನ್ನು ಉಂಟು ಮಾಡುವಲ್ಲಿ ಮಾರ್ಗದರ್ಶಕನಾಗಿದ್ದನು ಗುರುವಾದವನು. ತನ್ನ ಶಿಷ್ಯನ ಸರ್ವತೋಮುಖ ಅಭಿವೃದ್ಧಿಗಾಗಿ ಸಾಕಷ್ಟು ಪ್ರಯತ್ನಿಸುತ್ತಿದ್ದರು. ಗುರುವಿಗೆ ತೃಪ್ತಿಯಾಗುವಂತೆ ಶಿಷ್ಯರು ಆದರ್ಶಜೀವನ ನಡೆಸುತ್ತಿದ್ದರು. ಶಿಷ್ಯನ ಒಂದು ನಡೆನುಡಿಗೆ ಗುರುವೇ ಕಾರಣನಾಗಿದ್ದನು. "ಏಳೆಂಟು ವರುಷದಿಂದೊಳಗೆ ಶಿಕ್ಷಣ ಪೂರೈಸುತ್ತಿತ್ತು. ಗುರುವಿನ ಪಕ್ಕದಲ್ಲಿ ತೀರಮುಂದುಗಡೆ, ಹಿಂದುಗಡೆ ಶಿಷ್ಯ ಕುಳಿತುಕೊಳ್ಳಬಾರದು. ಶಿಷ್ಯ ಅವಿಧೇಯರಾಗಿ ನಡೆದುಕೊಂಡ ಚಟ್ಟರಿಗೆ ಓಜರಿಂದ ಒದೇತ (ಖಡ್ಡಯಾ) ಏಟು (ಚವೇಡಾ) ಕೋಲಿನ ಪೆಟ್ಟು ಬೆತ್ತಪ್ರಹಾರ (ವಹ) ಬೀಳುತ್ತಿತ್ತು. ಈ ರೀತಿಯಾಗಿ ತಿದ್ದಲಾಗದ ಚಟ್ಟನನ್ನು ಅವನ ಪಾಲಿಗೆ ಇರಲು ಬಿಡಲಾಗುತ್ತಿತ್ತು. ತಮ್ಮ ಶಿಷ್ಯರು ವಿದ್ಯೆ ಸಾಮರ್ಥ್ಯಗಳಲ್ಲಿ ತಮ್ಮನ್ನು ಮೀರಿಸಿದಾಗ ಗುರುಗಳು ಹರ್ಷಿಸುತ್ತಿದ್ದರು. ನೀಮುಂ ಮಹಾಪುರುಷದಿರ್ ನಿಮ್ಮನ್ನರೆ ಧೈರ್ಯವಂತರುಂ ಸತ್ವವಂತರು ಮೂರುಮಿಲ್ಲಂ ಇನಿತು ಕಾಲಂ ತಪಂಗೆಯ್ದುಪ್ಪೆಮಗಪ್ಪೊಡಮಿನಿತು ಧೈರ್ಯಮಂ ಸತ್ವಮುಮಿಲ್ಲೆಂದು ಗುರುಗಳ ಪೊಗಟ್ದೆಡೆ

ಗುರುಗಳ ಪೊಗಟ್ಗೆ ರಾಗಿಸಿ ಸಂತೋಸಂ ಪಟ್ಟು'' ಎಂಬ ಉಲ್ಲೇಖ ವಡ್ಡಾರಾಧನೆ ಕಥೆಗಳಲ್ಲಿ ಇದೆ''.[೯]

ಗುರುವಿನ ಮನೆಯೇ ಪಾಠಶಾಲೆಯಾಗಿತ್ತು. ನಿಸರ್ಗದ ಒಂದು ಮಡಿಲಲ್ಲಿ ಇವು ಇದ್ದು ವೇದಗಳಂತ ಪವಿತ್ರವಾದ ಸಾಹಿತ್ಯದ ಅಭ್ಯಾಸಕ್ಕೆ ಪವಿತ್ರವಾದ ಸ್ಥಳಗಳಾಗಿದ್ದವು. ಶಿಷ್ಯರು ಗುರು ಸೇವೆ ಮಾಡುತ್ತಾ ಪ್ರಾಪಂಚಿಕ ಕಷ್ಟದಲ್ಲಿ ಭಾಗಿಯಾಗಿ ಮುಂದಿನ ಜೀವನಕ್ಕೆ ತಯಾರಾಗುತ್ತಿದ್ದರು. ಒಳ್ಳೆಯ ನಡತೆ ಮತ್ತು ನೈತಿಕ ಮಟ್ಟದ ಶಿಕ್ಷಣ ನೀಡಲಾಗುತ್ತಿತ್ತು. ಬ್ರಹ್ಮಚರ್ಯ ಕಟ್ಟುನಿಟ್ಟಾಗಿ ಪಾಲಿಸಬೇಕಾಗಿತ್ತು. ಶಿಷ್ಯರ ಒಂದು ವೈಯಕ್ತಿಕ ಭಿನ್ನತೆಗೆ ಅನುಗುಣವಾಗಿ ಶಿಕ್ಷಣ ನೀಡಲಾಗುತ್ತಿತ್ತು. ಗುರುವಿನಲ್ಲಿ ಒಂದು ನಿಕಟವಾದ ಸಂಬಂಧದಿಂದ ಗುರುವಿನ ಗುಣಗಳನ್ನು ಕಲಿತು ತನ್ನಲ್ಲಿ ರೂಢಿಸಿಕೊಳ್ಳುವುದು ಶಿಷ್ಯನ ಒಂದು ಕರ್ತವ್ಯವಾಗಿತ್ತು ಅಲ್ಲದೆ ಗುರುವಿನ ಒಂದು ರೀತಿ-ನೀತಿಗಳಿಂದ ಸ್ಫೂರ್ತಿ ಪಡೆದು ವಿದ್ಯಾರ್ಥಿಯು ಅವುಗಳನ್ನು ಅನುಕರಣೆಮಾಡುತ್ತಿದ್ದರು.

ಶೀಲಸಂವರ್ಧನೆ, ಸಮಾಜಸೇವಾಭಾವನೆ, ಪೌರನ ಕರ್ತವ್ಯಗಳು ವ್ಯಕ್ತಿತ್ವವಿಕಾಸ, ಶ್ರಮಗೌರವ, ಸಾಂಸ್ಕೃತಿಕ ಪರಂಪರೆಗಳ ಬಗ್ಗೆ ಗುರುಗಳು ವಿದ್ಯಾರ್ಥಿಗಳಲ್ಲಿ ಅರಿವನ್ನುಂಟುಮಾಡುತ್ತಿದ್ದರು.

ವಡ್ಡಾರಾಧನೆ ಕಾಲದ ಶಿಕ್ಷಣ ಪದ್ಧತಿಯ ವೈಶಿಷ್ಟ್ಯವೆಂದರೆ ವಿದ್ಯೆಪಡೆಯುವ ಸ್ಥಳಗಳು ಬಹುಮಟ್ಟಿಗೆ ಗೊಂದಲಮಯ. ಕೋಲಾಹಲ ಪೂರ್ಣ ವಾತಾವರಣದಿಂದ ದೂರವಾಗಿ ಕಾಡಿನ ಪ್ರಶಾಂತ ಸ್ಥಳಗಳಲ್ಲಿ ಏಕಾಂತ ಪವಿತ್ರ ವಾತಾವರಣದಲ್ಲಿ ಸ್ಥಾಪಿಸಲಾಗುತ್ತಿತ್ತು. ಶಿಕ್ಷಣದ ಪ್ರಮುಖ ಸಾಧನೆಯಾದ ಏಕಾಗ್ರ ಚಿಂತನಕ್ಕೆ ಈ ವಿದ್ಯಾಸ್ಥಳಗಳು ನೆರವಾಗುತ್ತಿದ್ದವು. ಅರಣ್ಯಶಾಲೆ ಅಥವಾ ಆಶ್ರಮ ಶಾಲೆಗಳು ಇವಾಗಿದ್ದವು.

ಶಿಕ್ಷಣವನ್ನು ಶಿಕ್ಷಣಾವಧಿಯನ್ನು ರೂಪಿಸುವ, ನಿರ್ದೇಶಿಸುವ ಅನುಪಮ ಆಚಾರ್ಯನಾಗಿದ್ದ ಗುರುವೇ ಶಿಕ್ಷಣ ಕ್ಷೇತ್ರದಲ್ಲಿ ನಿಜವಾದ ಕ್ರಿಯಾತ್ಮಕ ಶಕ್ತಿಯ ಮೂಲ ಸೂತ್ರನಾಗಿದ್ದನು. ಆತನ ಮನೆಯೇ ಪಾಠಶಾಲೆಯಾಗಿತ್ತು. ವಿದ್ಯಾರ್ಥಿಯು ಗುರುವನ್ನು ಸಂದರ್ಶಿಸಿ ಆತನ ಶಿಷ್ಯತ್ವವನ್ನು ಪಡೆದುಕೊಂಡ ದಿನದಿಂದಲೇ ಶಿಕ್ಷಣ ಪ್ರಾರಂಭವಾಗುತ್ತಿತ್ತು. ಶಿಕ್ಷಣವನ್ನು ನೀಡುವಾಗ ಶಿಷ್ಯನ ವೈಯಕ್ತಿಕ ಗಮನವನ್ನು ಹರಿಸಲಾಗುತ್ತಿತ್ತು ಪರಿಪೂರ್ಣ ವೈಯಕ್ತಿಕ ಗಮನ ನೀಡುವಂತಾಗಲು ಶಿಷ್ಯನು ಗುರುವಿನೊಡನೆ ವಾಸಿಸಬೇಕಾಗಿತ್ತು ಗುರುವಿನ ಗೂಢ ಪದ್ಧತಿ, ಆತನ ಸಾಮರ್ಥ್ಯದ ರಹಸ್ಯಗಳು ಆತನ ವ್ಯಯಕ್ತಿಕ ಜೀವನ ಮತ್ತು ಕೃತಿಗಳ ಸಾರವನ್ನು ಶಿಷ್ಯನು ಮೈಗೂಡಿಸಿಕೊಳ್ಳಬೇಕಾಗುತ್ತಿತು. ಇವು ಕಲಿಸಲಾಗದಷ್ಟು ಸೂಕ್ಷ್ಮ ವಿಚಾರಗಳಾಗಿದ್ದವು. ಶಿಕ್ಷಣದ ಪರಮಗುರಿ ಮೋಕ್ಷ ಸಾಧನೆ ಆಗಿರುವುದರಿಂದ ವೈಯಕ್ತಿಕ ಗಮನ ನೀಡುವುದು ಅತಿ ಅವಶ್ಯಕವಾಗಿತ್ತು. ಈ ರೀತಿಯಗಿ ಗುರುಶಿಷ್ಯರ ಸಂಬಂಧ ಅನೂನ್ಯವಾಗಿತ್ತು.

## ೪.೪ ಬೋಧನಾ ವಿಧಾನ :

ಬೋಧನಾ ವಿಧಾನವು ಪ್ರಮುಖವಾಗಿ ಕ್ರಿಯ, ವಾಚನ, ಪಠಣ, ಪ್ರತಿಕ್ರಿಯ ಪ್ರಭಾವ, ಇತ್ಯಾದಿಗಳ ಮೂಲಕ ವ್ಯಕ್ತಿ ತನ್ನ ಶಿಕ್ಷಣವನ್ನು ಸಾಧಿಸುತ್ತಿದ್ದನು. ಇಂಥಹ ಕಲಿಕೆಗೆ ಪ್ರಚೋದಿಸುವುದೇ ಬೋಧನೆ. ಇಲ್ಲಿ ಮುಖ್ಯವಾಗಿ ಮೌಖಿಕಪದ್ಧತಿ - ಪದ್ಯರೂಪದಲ್ಲಿ, ವೈಯಕ್ತಿಕ ಪದ್ಧತಿ, ಸ್ವಅಧ್ಯಯನ, ಶ್ರವಣ ಪದ್ಧತಿ, ಅಕ್ಷರಬರಹ, ಗುರುವು ಹೆಚ್ಚಾಗಿ ವೈಯಕ್ತಿಕ ಬೋಧನಾ ಪದ್ಧತಿಯನ್ನು ಅನುಸರಿಸುತ್ತಿದ್ದನು. ಕೆಲ ಪ್ರಸಂಗಗಳಲ್ಲಿ ಎಲ್ಲರಿಗೂ ಕೂಡಿ ಬೋಧಿಸುತ್ತಿದ್ದನು. ಬೋಧನೆಯು ಬಾಯ್ದರೆಯಾಗಿ ಮೌಖಿಕವಾಗಿ ಸಾಗುತ್ತಿತ್ತು. ವೇದಗಳನ್ನು ಕಂಠಪಾಠಮಾಡುವ ಪದ್ಧತಿ ರೂಢಿಯಲ್ಲಿತ್ತು. ವೇದಗಳನ್ನು ಸರಿಯಾಗಿ ಕಾಯ್ದಿಡುವುದು ಅವುಗಳ ವಿಚಾರಣೆಗೋಸ್ಕರ ಸಂಹಿತಾಪಾಠ, ಪದಪಾಠ, ಕ್ರಮಪಾಠ, ಚಟಾಪಾಠ, ಘನಪಾಠ, ಕ್ರಮಗಳನ್ನು ಅನುಸರಿಸುತ್ತಿದ್ದರು.

ಮಂತ್ರಗಳು ಪ್ರಕೃತದಲ್ಲಿ ಉಪಲಬ್ಧವಾಗಿರುವ ಮೂಲಪಾಠಕ್ಕೆ ಸಂಹಿತಾಪಾಠ ಎಂದು ಹೆಸರು. ಈ ಪಾಠವನ್ನು ಪದವಿಭಾಗ ಮಾಡಿ ಒಂದೊಂದು ಪದವನ್ನು ಬಿಡಿಸಿ ಬಿಡಿಸಿ ಹೇಳುವ ಪಾಠಕ್ಕೆ ಪದಪಾಠವೆಂದು ಹೆಸರು, ಪದದಲ್ಲಿರುವ ಪದಗಳೇನು ಆಗಿವೆ ಎರಡೆರಡು ಪದಗಳನ್ನು ಕೂಡಿಸಿ ಹೇಳುವುದಕ್ಕೆ ಕ್ರಮಪಾಠ ಎನ್ನುವರು. ಅನಲೋಮ ವಿಲೋಮ ಕ್ರಮದಲ್ಲಿ ಎರಡು ಕ್ರಮದಲ್ಲಿ ಮೂರು ಮೂರು ಬಾರಿ ಹೇಳುವುದಕ್ಕೆ ಜಟಾಪಾಠವೆಂದು ಹೆಸರು. ಜಟಾಪಾಠಕ್ಕೆ ಮತ್ತೊಂದು ಪದವನ್ನು ಜೋಡಿಸಿದರೆ 'ಶಿಖಾ' ಪಾಠವಾಗುತ್ತದೆ. ಪದೋತ್ತರಂ ಜಟಾಮೇವ ಶಿಖಾಮಾರ್ಯಃ ಪ್ರಚಕ್ಷತೇ ಎಂದು ಇದು ಹೇಳುತ್ತಾರೆ.

ಈ ಎಲ್ಲಾ ಪಾಠಗಳನ್ನು ಈ ಕೆಳಗಿನಂತೆ ನೋಡಬಹುದು.

[೮]ಸಂಹಿತಾಪಾಠ – ಓಷಧಯ ಃ ಸಂಬದಂತೇ ಸೋಮೇನ ಸಹರಾಜ್ಞಾ

ಪದಪಾಠ – ಓಷಧಯಃ। ಸಂ। ವಂದಂತೇ।
ಸೋಮೇನ। ಸಹ। ರಾಜ್ಞಾ।

ಕ್ರಮಪಾಠ - ಓಷಧಯಃ ಸಂ। ಸಂವದಂತೇ। ವದಂತೇ।
ಸೋಮೇನ। ಸೋಮೇನ ಸಹ। ಸಹರಾಜ್ಞಾ।
ರಾಜ್ಞೇತಿ ರಾಜ್ಞಾ।

ಚಟಾಪಾಠ - ಓಷಧಯಃ ಸಂಸಮೋಷಧಯ ಓಷಧಯಃ ಸಂ
ಸಂವದಂತೇ ವದಂತೇ ಸಂ ಸಂ ವದಂತೇ।

ಶಿಖಾಪಾಠ - ಓಷಧಯಃ ಸಂ ಸಬೋಷಧಯ ಓಷಧಯಃ ಸಂ
ವದಂತೇ । ಸಂವದಂತೇ ವದಂತೇಸಂ ಸಂವದಂತೇ
ಸೋಮೇನ ॥

ಘನಪಾಠ - ಓಷಧಯಃ ಸಂ ಸಮೋಷಧಯ ಓಷಧಯಃ ಸಂ
ವದಂತೇ, ವದಂತೇ ಸಮೋಷಧಯ ಓಷಧಯಃ ಸಂವದಂತೇ।
ಸಂವದಂತೇ ವದಂತೇ ಸಂಸಂವದಂತೇ ಸೋಮೇನ ॥
ಸೋಮೇನ ವದಂತೇ ಸಂ ಸಂವದಂತೇ ಸೋಮೇನ ॥[೮]

ಹೀಗೆ ಪದಗಳ ಆವೃತ್ತಿ ಈ ಪಾಠಗಳಲ್ಲಿ ಅನೇಕ ಬಾರಿ ಆಗುವ ಕಾರಣ ಪದಗಳ ರೂಪಸ್ವರಗಳು ಅಸ್ಖಲಿತವಾಗಿ ಪರಿಶುದ್ಧವಾಗಿ ಉಳಿಯುತ್ತದೆ. ಈ ರೀತಿಯಾಗಿ ವೇದಗಳ ಅರ್ಥಗ್ರಹಣಕ್ಕೆ ಹೆಚ್ಚಿನ ಪ್ರಾಮುಖ್ಯತೆ ಇತ್ತು ಸರಿಯಾದ ಉಚ್ಚಾರಣೆಗೆ ಮಹತ್ವವಿತ್ತು. ಸರಿಯಾಗಿ ಉಚ್ಚಾರಣೆ ಮಾಡದಿದ್ದರೆ ಕೆಡಕುವುಂಟಾಗುತ್ತದೆ ಎಂಬ ಭಾವನೆ ಇದ್ದ ಕಾರಣ. ಈ ಕ್ರಮವನ್ನು ಅನುಸರಿಸುತ್ತಿದ್ದರು. ಗುರುವು ಹಿಂದಿನ ಪಾಠದ ಬಗ್ಗೆ ಪ್ರಶ್ನೆಗಳನ್ನು ಕೇಳಿಯೇ ಮುಂದುವರಿಸುತ್ತಿರುವುದರಿಂದ ಮಕ್ಕಳು ನಿಯಮಿತವಾಗಿ ಅಭ್ಯಾಸ ಮಾಡುತ್ತಿದ್ದರು, ಚರ್ಚಾಪದ್ಧತಿ ಅನುಸರಿಸುತ್ತಿದ್ದರು, ತತ್ವಜ್ಞಾನದಲ್ಲಿ ಕಥಾ ಪ್ರಸಂಗವನ್ನು ಅನುಸರಿಸುತ್ತಿದ್ದರು ಕಠಿಣವಾದ ವಿಷಯ ಮತ್ತು ಆಸಕ್ತಿ ಕೆರಳಿಸದೆ ಇರುವ ನೀರಸ ವಿಷಯಗಳನ್ನು ಪದ್ಯರೂಪದಲ್ಲಿ ಕಂಠಪಾಠಕ್ಕೆ ಅನುಕೂಲವಾಗುವಂತೆ ಬರೆದು ಕಲಿಸುತ್ತಿದ್ದರು.

ಬೋಧನಾ ಪದ್ಧತಿಯ ಪ್ರಮುಖ ಮಟ್ಟಿಲುಗಳೆಂದರೆ ಶ್ರವಣ, ಮನನ, ನಿಧಿದ್ಯಾಸನಗಳಾಗಿದ್ದವು, ಶ್ರವಣ ಎಂದರೆ ಗುರುವು ಉಚ್ಚರಿಸಿದ ಶಬ್ದಗಳನ್ನು ಕೃತಿಗಳನ್ನು ಗಮನವಿಟ್ಟುಕೇಳುವುದು. ಗುರು ಪರಂಪರೆ ಅಥವಾ ಸಂಪ್ರದಾಯಕ್ಕೆ ಅನುಗುಣವಾಗಿ ಶ್ರುತಿ ಪದ್ಧತಿಯನ್ನು ಅನುಸರಿಸಿ ಶಿಷ್ಯನಿಗೆ ಜ್ಞಾನದಾನವನ್ನು ಮಾಡಲಾಗುತ್ತಿತ್ತು. ಪರಿಮಿತ ಶಬ್ದಗಳಲ್ಲಿ ಅಪರಿಮಿತ ಅರ್ಥವನ್ನು ಅಡಗಿಸಿಕೊಳ್ಳುವ 'ಮಂತ್ರ' ಅಥವಾ ಸೂತ್ರ ರೂಪದಲ್ಲಿ ಜ್ಞಾನವನ್ನು ಉಪದೇಶಿಸಲಾಗುತ್ತಿತ್ತು. ಅರ್ಥಲೋಕವನ್ನು ತನ್ನಲ್ಲಿ ಅಡಗಿಸಿಕೊಂಡಿರುವ ಪ್ರಮಾಣ ಅಥವಾ ಓಂಕಾರ ಇದಕ್ಕೆ ಉತ್ತಮ ಉದಾಹರಣೆ ಆಗಿದೆ. ಗುರುವೇ ಚಲಿಸುವ ಮಸ್ತಕ ಭಂಡಾರವಾಗಿದ್ದ ಜ್ಞಾನಸ್ರೋತ್ರವಾಗಿದ್ದು ನೇರವಾಗಿ ಆ ಜ್ಞಾನವಾಹಿನಿ ತನ್ನತ್ತ ಹರಿಯುವಂತೆ ಮಾಡಿಕೊಳ್ಳುವುದೇ ಶಿಷ್ಯನ ಪ್ರಮುಖ ಕರ್ತವ್ಯವಾಗಿತ್ತು. ಗುರುವು ಉಚ್ಚರಿಸಿದಂತೆ ಕಂಠಪಾಠ ಮಾಡಿ ಉಚ್ಚರಿಸುವ ಪದ್ಧತಿಯೇ ಜ್ಞಾನಾರ್ಜನೆಯ ಮಾಧ್ಯಮವಾಗಿರುವದರಿಂದ ಶಬ್ದ ಅಥವಾ ಮಂತ್ರದ ಧ್ವನಿಗೆ ಅರ್ಥದ ಜೊತೆಗೆ ತನ್ನದೇ ಆದ ಶಕ್ತಿ ಮತ್ತು ಮಹತ್ವವೂ ಇತ್ತು. ಈ ಮಂತ್ರದಲ್ಲಿಯ, ಉದಾತ್ತ –

ಅನುದಾತ್ತ, ಸ್ವರಿತ ಉಚ್ಚಾರಣೆಗಳು ಅವುಗಳ ಗೂಢಾರ್ಥ ಆಂತರಿಕ ವಿನ್ಯಾಸಗಳು ತೊಡಕುಗಳು ಇವೆಲ್ಲವನ್ನು ಶಿಷ್ಯನು ಗ್ರಹಿಸಬೇಕಾಗಿತ್ತು.

'ಶಬ್ದವೇ ಬ್ರಹ್ಮ ಗುರುವಿನಿಂದ ಈ ರೀತಿ ಗ್ರಹಿಸಿದ ಆ ಜ್ಞಾನವನ್ನು ಮೈಗೂಡಿಸಿ ಕೊಳ್ಳಲು ಹೇಳಿಕೊಟ್ಟ ಪಾಠವನ್ನು ಆಲೋಚಿಸಿ, ಚಿಂತಿಸಿ, ಅರ್ಥಮಾಡಿಕೊಳ್ಳುವ ಪದ್ಧತಿಯನ್ನು ಅಂದರೆ 'ಮನನ' ಪದ್ಧತಿಯನ್ನು ಅನುಸರಿಸಲಾಗುತ್ತಿತ್ತು. ಈ ಪದ್ಧತಿಯ ಮೂಲಕ ಗುರುವು ಹೇಳಿಕೊಡುವ ಗ್ರಂಥಭಾಗದ ಅರ್ಥವನ್ನು ಬೌದ್ಧಿಕವಾಗಿ ಗ್ರಹಿಸಿದಂತಾಗುತ್ತಿತ್ತು. ಮನನದಿಂದ ಪಡೆದ ಜ್ಞಾನವನ್ನು ಆತ್ಮಸಾಕ್ಷಾತ್ಕಾರಕ್ಕೆ ಅಳವಡಿಸುವ ವಿಧಾನವನ್ನು ಅಂದರೆ ಜ್ಞಾನವನ್ನು ಕರತಲಾಮಲಕವಾಗುತ್ತಿತ್ತು. ಬೌದ್ಧಿಕವಾಗಿ ಸತ್ಯವನ್ನು ಗ್ರಹಿಸಿದ ಬಳಿಕ ಸತ್ಯಾರ್ಥಿಯ ಸಾಧಿಸಬಹುದಾದ ಈ ಸತ್ಯ ಸಾಕ್ಷಾತ್ಕಾರದ ನೆಲೆಯನ್ನು ಅಥವಾ ಕ್ರಮವನ್ನು 'ನಿಧಿದ್ಯಾಸನ' ಎಂದು ಕರೆಯಲಾಗುತ್ತಿತ್ತು. ಈ ಚಿಂತನಾಭ್ಯಾಸವನ್ನು 'ಉಪಾಸನ ವಿಧಿ' ಎಂದು ಕರೆಯಲಾಗುತ್ತಿತ್ತು.

ಈ ರೀತಿಯಾಗಿ ವಡ್ಡಾರಾಧನೆಯ ಕಾಲದಲ್ಲಿ ಜ್ಞಾನಾರ್ಥಿಗಳು ಬ್ರಾಹ್ಮಣರ ಪಾರಂಪರಿಕ ಬೋಧನಾ ವಿಧಾನ ಮೆಟ್ಟಲುಗಳನ್ನು ಅನುಸರಿಸುತ್ತಿದ್ದರು.

## ೪.೫ ಸಂಸ್ಕಾರಗಳು:

ವಡ್ಡಾರಾಧನೆಯಲ್ಲಿ ಬರುವ ಕತೆಗಳಲ್ಲಿ ವಿದ್ಯಾಭ್ಯಾಸವು ಬ್ರಾಹ್ಮಣರ ಪಾರಂಪರಿಕ ಕತೆಯನ್ನು ಒಳಗೊಂಡಿತ್ತು ಪ್ರಮುಖವಾಗಿ ಎರಡು ಸಂಸ್ಕಾರಗಳು ಕಂಡುಬರುತ್ತದೆ. 'ಸುಕುಮಾರ ಸ್ವಾಮಿಯಕಥೆ' ಮತ್ತು ಭದ್ರಬಾಹು ಬಟ್ಟಾರರ ಕಥೆಗಳಲ್ಲಿ ಈ ಸಂಸ್ಕಾರಗಳನ್ನು ಕಾಣಬಹುದಾಗಿದೆ.

ಶಿಷ್ಯತ್ವ ಪ್ರಧಾನ ಒಂದು ಶಾಸ್ತ್ರೋಕ್ತ ಪವಿತ್ರ ಕಾರ್ಯವಾಗಿತ್ತು ಒಳ್ಳೆಯವಾರ ದಿವಸ ವಿದ್ಯಾನಕ್ಷತ್ರದಲ್ಲಿ. ಗುರುವು ಶಿಷ್ಯನನ್ನು ಪರಿಗ್ರಹಿಸಿ ಕರ್ಣೋಪದೇಶವನ್ನು ನೀಡಿ ಆತನ ಹೊಸಜನ್ಮ ನೀಡುತ್ತಿದ್ದನು. ತಂದೆ ತಾಯಿಗಳು ಭೌತಿಕ ಜನ್ಮ ನೀಡಿದರೆ ಗುರುವು ಎರಡನೇ ಜನ್ಮವಾದ ಆಧ್ಯಾತ್ಮಿಕ ಜೀವನವನ್ನು ನೀಡುತ್ತಿದ್ದನು. ಈ ರೀತಿಯ ಶಿಕ್ಷಣ ವಿದ್ಯಾರ್ಥಿಯ ಮನಸ್ಸು ಮತ್ತು ಆತ್ಮವನ್ನು ತೆರೆಯುವಂತಹದಾಗಿತ್ತು. ಶಿಷ್ಯ ವೈಯಕ್ತಿಕ ಗಮನ ನೀಡುವಂತಾಗಲು ಶಿಷ್ಯ ಗುರುವಿನೊಂದಿಗೆ ವಾಸಿಸಬೇಕಿತ್ತು. ಗುರುವಿನ ಸಾಮರ್ಥ್ಯ ರಹಸ್ಯ ಜೀವನದ ಸಾರ ವಿದ್ಯಾರ್ಥಿ ತಿಳಿದುಕೊಳ್ಳುವುದು ಸೂಕ್ಷ್ಮವಿಚಾರವಾಗಿತ್ತು.

ಶ್ರವಣ, ಮನನ, ನಿಧಿದ್ಯಾಸನ ಮೂಲಕ ಜ್ಞಾನವನ್ನು ಅಂದರೆ ಶ್ರವಣ ಎಂದರೆ ಗುರುವು ಉಚ್ಚರಿಸಿದ ಶಬ್ದಗಳನ್ನು ಗಮನವಿಟ್ಟುಕೊಂಡು ಕೇಳುವುದು. ಶೃತಿ ಪದ್ಧತಿಯನ್ನು ಅನುಸರಿಸಿ

ಶಿಷ್ಯನಿಗೆ ಜ್ಞಾನದಾಹ ನೀಡಲಾಗುತ್ತಿತ್ತು ಪಾಠವನ್ನು ಕುರಿತು ಮನನ ಮಾಡಿಕೊಳ್ಳಲಾಗುತ್ತಿತ್ತು. ಮನನವಾದ ಜ್ಞಾನವನ್ನು ಗ್ರಂಥದ ಭಾಗಶಃ ಅರ್ಥ ಬೌದ್ಧಿಕವಗಿ ಗ್ರಹಿಸುವುದ ನಿಧಿದ್ಯಾಸನ ಈ ಮೂರು ಹಂತವನ್ನೇರಿ ಸಿದ್ಧಿಯನ್ನು ಪಡೆದಾಗ ವಿದ್ಯಾಧ್ಯಯನ ಪೂರ್ಣವಾಗುತ್ತಿತ್ತು.

ವಿದ್ಯಾರ್ಥಿಯ ವಿದ್ಯಾಧ್ಯಯನ ಪೂರ್ಣಗೊಂಡ ನಂತರ ಇನ್ನೊಂದು ಮುಕ್ತಾಯ ಸಮಾರಂಭ ಇದು ಎರಡನೇ ಸಂಸ್ಕಾರವಾಗಿತ್ತು ವಿದ್ಯೆ ಅಧ್ಯಯನ ಪಡೆದ ಶಿಷ್ಯರಿಗೆ ಉಪದೇಶ ರೂಪದ ವಚನಗಳನ್ನು ದಯಪಾಲಿಸುತ್ತಿದ್ದರು. ಈ ಸಂಸ್ಕಾರವನ್ನು ಸುಕುಮಾರ ಸ್ವಾಮಿಯ ಕಥೆಯಲ್ಲಿ ವಿದ್ಯಾಭ್ಯಾಸವನ್ನು ಪೂರ್ತಿಗೊಳಿಸಿದ ಅಗ್ನಿಭೂತಿ ಮತ್ತು ವಾಯುಭೂತಿ ಅಣ್ಣತಮ್ಮಂದಿರು. ಸೂರ್ಯಮಿತ್ರಚಾರ್ಯರ ಗುರುವಿನಲ್ಲಿ. ತಮ್ಮ ದಯೆಯಿಂದ ನಾವೂ ವಿದ್ಯಾವಂತರಾದೇವು. ಕಾರಣ ನಮ್ಮೂರಿಗೆ ಹೋಗಲು ಅಪ್ಪಣೆ ಕೊಡಿ ಎಂದಾಗ ಗುರುಗಳು ಸತ್ಯಸಂಧರಾಗಿರಿ ನಿಮ್ಮ ಕರ್ತವ್ಯಗಳನ್ನು ಪಾಲಿಸಿರಿ. ದಿನಚರಿಯ ವೇದಾಧ್ಯಯನದದಲ್ಲಿ ಆಸಡ್ಡೆ ಮಾಡಬೇಡಿರಿ ಸತ್ಯಬಾಹೀರರಾಗ ಬೇಡಿರಿ. ದೋಷಾರೋಪಣೆಗೆ ಸಿಗದೆ ಕೆಲಸ ಕಾರ್ಯಗಳನ್ನು ಮಾಡಿ ಸದಾಕರ್ತವ್ಯ ನಿರ್ವಹಿಸುದಲ್ಲಿ ನಿಷ್ಠಾವಂತರಾಗಿರಿ. ನಾನು ನಿಮ್ಮ ಸೋದರ ಮಾವ ನಿಜ ಆದರೆ ನಾನು ಸುಳ್ಳು ಹೇಳಿದೆ ಏಕೆಂದರೆ ಮತ್ತು ನೀವು ಆಲಸ್ಯರಾಗಿ ಸಪ್ತವ್ಯಸನಗಳಿಗೆ ಬಲಿಯಾಗಿ ವಿದ್ಯಾಭ್ಯಾಸ ಪಡೆಯುವುದಿಲ್ಲವೆಂದು ಉಪದೇಶಮಾಡಿ ಅವರಿಗೆ ಬೇಕಾದ ಬಟ್ಟೆ - ಬರೆ, ಉಡುಗೊರೆಗಳನ್ನು ಕೊಟ್ಟು ಕಳುಹಿಸಿದನು ಎಂಬ ಉಲ್ಲೇಖವಿದೆ. ಅದೇ ರೀತಿ ಬದ್ರಬಾಹು ಬಟ್ಟಾರರ ಕಥೆಯಲ್ಲಿ ಗೋವರ್ಧನ ಭಟಾರರು ಭದ್ರಬಾಹುವನ್ನು ಎಲ್ಲಾ ವಿಧ್ಯಾಭ್ಯಾಸ ಕಲಿಸಿದ ನಂತರ ಅಂತಿಮವಾಗಿ ನೀನು ಕಲಿತ ವಿದ್ಯೆ ಪಾಂಡಿತ್ಯಗಳನ್ನು ಮರೆದು ಅಲ್ಲಿನ ಪಂಡಿತರೊಂದಿಗೆ ವಾದದಲ್ಲಿ ಗೆದ್ದು ಹತ್ತು ದಿಕ್ಕುಗಳಲ್ಲೂ ನಿನ್ನ ಕೀರ್ತಿ ಹರಡಲಿ ಎಂದು ಆಶೀರ್ವಾದ ಮಾಡಿ ಕಳುಹಿಸಿಕೊಟ್ಟರು. ಈ ರೀತಿಯಾಗಿ ಶೈಕ್ಷಣಿಕ ಸಂಸ್ಕಾರಗಳ ಉಲ್ಲೇಖ ವಡ್ಡಾರಾಧನೆಯ ಕಥೆಗಳಲ್ಲಿ ಉಲ್ಲೇಖಿತವಾಗಿರುವುದರಿಂದ ಉತ್ತಮ ಸಂಸ್ಕಾರಗಳು ಈ ಕಾಲದ ಶೈಕ್ಷಣಿಕ ಪಠ್ಯದ ಭಾಗವಾಗಿರುವುದು ವಿಧಿತವಾಗುತ್ತದೆ.

## ೪.೬ ಶೈಕ್ಷಣಿಕ ಪಠ್ಯಗಳು

ವಡ್ಡಾರಾಧನೆಯ ಕಥೆಗಳಲ್ಲಿ ಬ್ರಾಹ್ಮಣರ ಪಾರಂಪರಿಕ ಅಭ್ಯಾಸಕ್ರಮ ಸುಮಾರು ನಾಲ್ಕು ಸಾರೆ ಬರುತ್ತದೆ. ಈ ಅಭ್ಯಾಸಕ್ರಮಗಳಲ್ಲಿ ಮೊದಲನೆಯ ಪಟ್ಟ ಎಲ್ಲಕ್ಕೂ ಹೆಚ್ಚು ವಿಷಯ ಅಥವಾ ಗ್ರಂಥಗಳನ್ನೊಳಗೊಂಡಿದೆ. ನಾಲ್ಕುವೇದಗಳು : ಚತುರ್ವೇದಗಳನ್ನು ೧)ಋಗ್ವೇದ, ೨)ಯಜುರ್ವೇದ ೩)ಸಾಮವೇದ, ೪)ಅರ್ಥವಣವೇದ.

**ಋಗ್ವೇದ** : ಇದು ಆರ್ಯರ ಪ್ರಥಮ ಧಾರ್ಮಿಕ ಗ್ರಂಥ. ಇದು ಭಾರತದ ಪ್ರಥಮ ಸಾಹಿತ್ಯಿಕ ಕೃತಿಯಾಗಿದೆ. ಕೆಲವು ಮಂತ್ರಗಳನ್ನು ಹೊರತು ಪಡಿಸಿ ನಿಸರ್ಗದೇವತಗಳಾದ

ವರುಣ, ಇಂದ್ರ, ಸೂರ್ಯ, ಅಗ್ನಿ, ಸೋಮ, ರುದ್ರ ಉಷಸ್ ಆದಿತಿ ಮುಂತಾದ ದೇವತೆಗಳನ್ನು ಕುರಿತು ಪ್ರಾರ್ಥನಾ ಮಂತ್ರಗಳಾಗಿವೆ. ಅಲ್ಲದೆ ಅಮೂಲ್ಯವಾದ ಸಾಹಿತ್ಯದ ಮೂಲಾಧಾರವಾಗಿದೆ.

**ಯಜುರ್ವೇದ** : ಇದೊಂದು ಗದ್ಯ ಮಂತ್ರಗಳ ಸಂಗ್ರಹಣ ಇದರಲ್ಲಿ ಯಜ್ಞ, ಯಾಗಾದಿಗಳ ಕುರಿತು ಹೇಳಿದ ಮಂತ್ರಗಳು. ಇದರಲ್ಲಿ ಎರಡು ವಿದ ೧.ಶುಕ್ಲ ಯಜುರ್ವೇದ ೨.ಕೃಷ್ಣ ಯಜುರ್ವೇದ

**ಸಾಮವೇದ:** ಈ ವೇದದಲ್ಲಿ ೧೫೪೯ ಋಕ್ (ಮಂತ್ರಗಳಿವೆ) ಮಾಡುವ ಕಾಲಕ್ಕೆ ಹೇಳಲಾಗುವ ಮಂತ್ರಗಳು ಗಾನರೂಪದಲ್ಲಿವೆ.

**ಅಥರ್ವವೇದ:** ಈ ವೇದದಲ್ಲಿ ೭೩೧ ಮಂತ್ರಗಳಿದ್ದು ಇದರಲ್ಲಿರುವ ಮಂತ್ರಗಳು ಮಾಟಗಾರಿಕೆ, ಮಂತ್ರ, ತಂತ್ರ, ಯಕ್ಷಣೀವಿದ್ಯೆ, ವೈದ್ಯವಿದ್ಯೆ, ವಶೀಕರಣ, ಕೃಷಿ ಮುಂತಾದ ಲೌಕಿಕ ವಿಷಯಗಳನ್ನು ಸಂಬಂಧಿಸಿವೆ.

೬ ಅಂಗಗಳು : ಶಿಕ್ಷಾ, ಕಲ್ಪ, ನಿರುಕ್ತ, ಛಂದಸ್ಸು, ವ್ಯಾಕರಣ, ಜ್ಯೋತಿಷ್ಯ

೧. **ಶಿಕ್ಷಾ** :- ಇವು ಆರು ಶಿಕ್ಷ (ಶಿಕ್ಷಾ) ಇದು ಸ್ವರ ಮತ್ತು ವರ್ಣ (ಅಕ್ಷರ)ಗಳ ಉತ್ಪತ್ತಿ ಸ್ಥಾನವನ್ನು ತಿಳಿಸುತ್ತದೆ.

೨. **ಕಲ್ಪ** : ಯಜ್ಞ ವಿಧಾನ ಋತ್ವಿಕ್ಕುಗಳು ಸಾಧನಗಳ ಬಗ್ಗೆ ತಿಳಿಸುತ್ತದೆ. ಉದಾ: ಶ್ರೌತಸೂತ್ರ, ಗೃಹ್ಯಸೂತ್ರ, ಧರ್ಮಸೂತ್ರ.

೩. **ನಿರುಕ್ತ** : ಇದು ಪದಗಳ ಉತ್ಪನ್ನ ಅವುಗಳ ಅರ್ಥ ವ್ಯತ್ಯಾಸವನ್ನು ತಿಳಿಸುತ್ತದೆ.

೪. **ಛಂದಸ್ಸು** : ಇದು ಶ್ಲೋಕ (ಮಂತ್ರ)ಗಳ ಗುರು, ಲಘು ವಿನ್ಯಾಸ ತಿಳಿಸುತ್ತದೆ.

೫. **ವ್ಯಾಕರಣ** : ಇದು ಪದ ಸ್ವರೂಪ, ಧಾತು, ಪ್ರಕೃತಿ, ಪ್ರತ್ಯಯ ಇತ್ಯಾದಿಗಳನ್ನು ತಿಳಿಸುತ್ತದೆ.

೬. **ಜ್ಯೋತಿಷ್ಯ** : ಯಜ್ಞ ಮಾಡಲು ಶುಭದಿನ, ನಕ್ಷತ್ರ ಸ್ಥಾನ ಮುಂತಾದವುವನ್ನು ತಿಳಿಸುತ್ತದೆ.

**೧೮ ಧರ್ಮಶಾಸ್ತ್ರಗಳು**

ಮನು, ಯಮ, ಗೌತಮ, ವಶಿಷ್ಠ, ಅತ್ರಿ, ದಕ್ಷ, ವಿಷ್ಣು, ಅಂಗೀರಸ, ಉಶನಾ, ವಾಕ್ಪತಿ, ವ್ಯಾಸ, ಅಪಸ್ತಂಬ, ಕಾತ್ಯಾಯನ, ನಾರದ, ಯಾಜ್ಞವಲ್ಕ್ಯ, ಪರಾಶರ, ಸಂವರ್ತ, ಶಂಖ, ಹಾರೀತ, ಲಖಿತ ಇದರಿಂದ ಧರ್ಮಶಾಸ್ತ್ರಗಳು ರಚಿತವಾಗಿದ್ದು ಅವುಗಳಲ್ಲಿ ಹದಿನೆಂಟು.

**ಮೀಮಾಂಸೆ** : 'ವಸ್ತುವೊಂದರ ಸ್ವರೂಪದ ಯಥಾರ್ಥ ನಿರ್ಣಯ'' ತಿಳಿಸುವುದು

**ನ್ಯಾಯ** : ಪ್ರಧಾನವಾಗಿ ಬೌದ್ಧಿಕವಾಗಿ ವಿಶ್ಲೇಷಣಾತ್ಮಕವೂ ಆದ ಸಿದ್ಧಾಂತವನ್ನು ಪ್ರತಿಪಾದಿಸುವುದೇ ನ್ಯಾಯ.

**ಪ್ರಮಾಣ** : ಸತ್ಯವಾಕ್ಯ - ಸತ್ಯಜ್ಞಾನ, ಸಾಧನ, ಕೃತಜ್ಞತೆ, ವಿಶ್ವಾಸ, ಪ್ರತಿಜ್ಞೆ ತಿಳಿಸುವುದು.

**ಅಲಂಕಾರ** : ಚಲುವಿನ ವಾಕ್ಯಗಳು

**ನಾಟಕ** : ದೃಶ್ಯಕಾವ್ಯ

**ಚಾಣಕ್ಯ** : ಅರ್ಥಶಾಸ್ತ್ರ

**ಸಾಮುದ್ರಿಕ** : ಸಾಮುದ್ರಿಕ ಶಾಸ್ತ್ರ

**ಶಾಲಿಹೋತ್ರ** : ಶಾಲಿಹೋತ್ರ ಋಷಿಯ ಅಶ್ವಿಶಾಸ್ತ್ರ

**ಪಾಳಕಾಪ್ಯ** : ಪಾಳಕಾಪ್ಯ ಋಷಿ ಪ್ರಣೀತವಾದ ಗಜಶಾಸ್ತ್ರ

**ಹಾನಿತ** : ವೈದ್ಯಕೀಯ ಗ್ರಂಥ

**ಅಶ್ವಿನಿಮತ** : ಇದು ಕೂಡಾ ವೈದ್ಯಕೀಯ ಗ್ರಂಥ ಒಂದು ಮಂತ್ರವಾಗಿದೆ

**ಬಾಹುಟ** : ಇದು ವೈದ್ಯಕೀಯ ಗ್ರಂಥದ ಹೆಸರಾಗಿದೆ.

**ಸುಶ್ರುತ** : ಸುಶೃತಗ್ರಂಥ

**ಕ್ಷಾರ ಪಾಣೀಯ** : ಬಿಡುಲವಣ ಅಥವ ಕೃಷಲವಣದ ಪಾನಕ್ಕೆ ಸಂಬಂಧಿಸಿದ ವೈದ್ಯಗ್ರಂಥ

ಈ ಮುಂತಾದ ಪಠ್ಯ ವಿಷಯಗಳು ಅಗ್ನಿಭೂತಿ ಮತ್ತು ವಾಯುಭೂತಿ ಸೋಹದರರು ಈ ಅಭ್ಯಾಸ ಕ್ರಮವನ್ನು ೭-೮ ವರ್ಷಗಳಲ್ಲಿ ಗುರುಗಳಾದ ಸುರ್ಯಮಿತ್ರಾಚಾರ್ಯರಲ್ಲಿ ಪೂರ್ತಿಗೊಳಿಸಿದರು ಎಂಬ ಉಲ್ಲೇಖವಿರುವುದು ಅಧ್ಯಯನದಿಂದ ತಿಳಿದು ಬರುತ್ತದೆ.

ದಿಗಂಬರ ಜೈನಮುನಿಗಳ ಅಭ್ಯಾಸಕ್ರಮ ಎರಡುಸಲ ಬರುವುದು ಇದು ಕೂಡಾ ಪಾರಂಪರಿಕವಾದುದು. ಸುಕುಮಾರ ಸ್ವಾಮಿಯ ಕಥೆಯಲ್ಲಿ ಸೂರ್ಯಮಿತ್ರಾಚಾರ್ಯರರು ಸುಧರ್ಮಾಚಾರರಲ್ಲಿ ೪ ಅನುಯೋಗಗಳು, ಪ್ರಥಮಯೋಗ, ಚರಣಾನುಯೋಗ, ಕರಣಾನುಯೋಗ, ದ್ರವ್ಯಾನುಯೋಗ, ಸಂಗಾಣಿ ಲೋಗಾಣಿ, ತ್ರಿಷಷ್ಟಿ ಶಿಲಾಕಾ ಪುರುಷರ ಚರಿತೆ ಈ ಅಭ್ಯಾಸಕ್ರಮವನ್ನು ಹಸ್ತಗತ ಮಾಡಿಕೊಳ್ಳಲು ೧೨ವರ್ಷ ಅವಧಿಬೇಕಾಯಿತು.

**ಮಂತ್ರವಾದ** : ಪಠ್ಯಕ್ರಮದಲ್ಲಿ ಮಂತ್ರ ಶಾಸ್ತ್ರಕ್ಕೆ ಸಂಬಂಧಿಸಿದ ಗ್ರಂಥದ ಹೆಸರು

**ಲೋಗಾಣಿ** : ಜೈನ ವಿಶ್ವ ವಿವರಣಾಶಾಸ್ತ್ರಕ್ಕೆ ಸಂಬಂಧಿಸಿದ ಗ್ರಂಥವಾಗಿದೆ.

**ಸಂಗಾಣಿ** : ಇದು ಕೂಡ ಜೈನ ವಿಶ್ವ ವಿವರಣಾ ಶಾಸ್ತ್ರಕ್ಕೆ ಸಂಬಂಧಿಸಿದ ಗ್ರಂಥದ ಹೆಸರು.

**ಅನುಯೋಗಗಳು ನಾಲ್ಕು**

**ಪ್ರಥಮಾನುಯೋಗ** : ಭರತಖಂಡಕ್ಕೆ ಸಂಬಂಧಿಸಿದ ತೀರ್ಥಂಕರರ, ಚಕ್ರವರ್ತಿಗಳ ಮತ್ತು ಇತರ ದೊಡ್ಡ ಐತಿಹಾಸಿಕ ವ್ಯಕ್ತಿಗಳ ಜೀವನ ಚರಿತ್ರೆಗಳಿವೆ. ಈ ಮಹಾಪುರುಷರ ಚರಿತ್ರೆ ಮಹಾಪುರಾಣದಲ್ಲಿ ನಿರೂಪಿತವಾಗಿದೆ.

**ಚರಣಾನುಯೋಗ** : ಗೃಹಸ್ಥನಿಗೆ ಮತ್ತು ಮನೆಇಲ್ಲದ ಸನ್ಯಾಸಿಗೆ ವಿಧಿಸಿದ ನಡವಳಿ ನಿಯಮಕ್ಕೆ ಸಂಬಂಧಿಸಿದೆ.

**ಕರಣಾನುಯೋಗ** : ವಿಶ್ವ ಮತ್ತು ವಿಶ್ವವನ್ನು ರೂಪಿಸಿರುವ ಘಟಕಾಂಶಗಳನ್ನು ನಿರೂಪಿಸುತ್ತದೆ.

**ದ್ರವ್ಯಾನುಯೋಗ** : ಜೀವ ಪುದ್ಗಲ ಮತ್ತು ತತ್ವದ ಇತರ ಮುಖ್ಯ ಅಂಗಗಳ ಸ್ವರೂಪವನ್ನು ವಿವರಿಸುವ ಆಧ್ಯಾತ್ಮಿಕ ಗ್ರಂಥವಾಗಿದೆ. ಈ ಅಭ್ಯಾಸಕ್ರಮವಲ್ಲದೆ ದ್ವಾದಶಾಂಗಗಳು ಚತುರ್ದಶ ಪೂರ್ವ ೧೪ ಪೂರ್ವಗಳನ್ನು ಒಳಗೊಂಡಿರುವ ಪಾರಂಪರಿಕ ಜೈನ ಅಭ್ಯಾಸಕ್ರಮ.

**ದ್ವಾದಶಾಂಗಗಳು** : ಆಚಾತಾಂಗ, ಸೂತ್ರಕೃತಾಂಗ, ಸ್ಥಾನಾಂಗ, ಸಮವಾಯೂಂಗ, ವ್ಯಾಖ್ಯಾಪ್ರಜ್ಞಪ್ತಿ, ಜ್ಞಾತ್ರಧರ್ಮದ ಕೃತಾಂಗ, ಉಪಾಸಕಾಧ್ಯಾಯಾಂಗ, ಅಂತಕೃದ್ದಶಾಂಗ, ಅನುತ್ತಕಾಪಪಾತಿಕದಶಾಂಗ, ಪ್ರಶ್ನೆವ್ಯಾಕರಣಾಂಗ ವಿಪಾಕಸೂತ್ರಾಂಗ, ದೃಷ್ಟಿಪ್ರವಾದಾಂಗ ಇವು ಹನ್ನೆರಡು.

**ಹದಿನಾಲ್ಕು - ಪೂರ್ವಾಂಗಗಳು**

ಉತ್ಪಾದ, ಅಗ್ರಾಣಿಯ, ವೀರ್ಯಾನುವಾದ, ಅಸ್ತಿ-ನಾಸ್ತಿ -ಪ್ರವಾದ ಜ್ಞಾನ ಪ್ರವಾದ, ಸತ್ಯಪ್ರವಾದ, ಆತ್ಮಪ್ರವಾದ, ಕರ್ಮಪ್ರವಾದ, ಪ್ರತ್ಯಾಖಾನುವಾದ, ವಿದ್ಯಾನುವಾದ, ಕಲ್ಯಾಣವಾದ, ಪ್ರಾಣವಾದ, ಕ್ರಿಯಾವಿಶಾಲ ತ್ರಿಲೋಕಬಿಂದುಸ್ಥಾನ ಈ ಹದಿನಾಲ್ಕು ಆಗಮ ವಿಚಾರಗಳು ಈ ರೀತಿಯ ಅಭ್ಯಾಸ ಕ್ರಮದ ಅಧ್ಯಯನ ಒಬ್ಬ ಜೈನಾಚಾರ್ಯರ ಮಾರ್ಗ ದರ್ಶನದಲ್ಲಿ ಸಾಗುತ್ತಿತ್ತು.

ಅರಸು ಕುಮಾರರಿಗೆ ಸಾಮಾನ್ಯವಾಗಿ ೭೨ ಕಲೆಯ ಬೇಧ ಪ್ರಬೇಧಗಳನ್ನು ಪಾರಂಪರಿಕವಾಗಿ ಅಭ್ಯಾಸ ಕ್ರಮದಲ್ಲಿ ಅನುಸರಿಸಲಾಗುತ್ತಿತ್ತು – ೭೨ ಕಲೆಗಳ ಹೆಸರು ಈ ಕೆಳಗಿನಂತಿವೆ.

“೧. ಲೇಖ, ೨. ಗಣಿತ, ೩.ರೂಪ, ೪.ನೃತ್ಯ, ೫.ಗೀತ, ೬.ವಾದ್ಯ, ೭.ಸ್ವರಗತ, ೮.ಪುಷ್ಕರಗತ, ಸಮತಾಲ, ದ್ಯೂತ, ಜನವಾದ, ಪೊಕ್ಖಚ್ಚಂ, ಅಷ್ಟಾಪದ, ದಗಮಟ್ಟಿಯ (ಉದಕಮೃತ್ತಿಕಾ) ಅನ್ನವಿಧಿ, ಪಾನವಿಧಿ, ವಸ್ತ್ರವಿಧಿ, ಶಯನ ವಿಧಿ, ಅಜ್ಜಂ (ಆರ್ಯಾ), ಪ್ರಹೇಲಿಕಾ, ಮಾಗಧಿಕಾ, ಗಾಥಾ, ಶ್ಲೋಕ, ಗಂಧಯುಕ್ತಿ, ಮಧುಸಿಕ್ಥ, ಆಭರಣವಿಧಿ, ತುರುಣೀ-

ಪ್ರತಿಕರ್ಮ, ಸ್ತ್ರೀಲಕ್ಷಣ, ಪುರುಷಲಕ್ಷಣ, ಹಯಲಕ್ಷಣ, ಗಜಲಕ್ಷಣ, ಗೋಣ (ವೃಷಭ ಲಕ್ಷಣ) ಕಕ್ಕುಟ ಲಕ್ಷಣ, ಮೇಂಢಾ ಲಕ್ಷಣ, ಚಿತ್ರಲಕ್ಷಣ, ಛತ್ರಲಕ್ಷಣ, ದಂಡಲಕ್ಷಣ, ಅಸಿಲಕ್ಷಣ, ಮಣಿಲಕ್ಷಣ, ಕಾಕನಿಲಕ್ಷಣ, ಚರ್ಮಲಕ್ಷಣ, ಚಂದ್ರಲಕ್ಷಣ, ಸೂರ್ಯಚರಿತ, ರಾಹುಚರಿತ, ಗ್ರಹಚರಿತ, ಸೌಭಾಗ್ಯಕರ, ದುರ್ಭಾಗ್ಯಕರ, ವಿದ್ಯಾಗತ, ಮಂತ್ರಗತ, ಪ್ರತಿವ್ಯೂಹ, ಸ್ಕಂಧಾವಾರಮಾನ, ನಗರಮಾನ, ವಾಸ್ತುಮಾನ, ಸ್ಕಂಧಾವಾರಮಾನ, ನಗರಮಾನ, ವಾಸ್ತುಮಾನ, ಸ್ಕಂಧಾವಾರನಿವೇಶ, ವಾಸ್ತುನಿವೇಶ, ನಗರನಿವೇಶ, ಈಸತ್ಥಂ (ಈಷ್ವಸ್ತ್ರಂ) ಛರುಪ್ಪವಾಯಂ, (ತ್ಸರುಪ್ರವಾದ್), ಅಶ್ವಶಿಕ್ಷಾ, ಹಸ್ತಶಿಕ್ಷಾ, ಧನುರ್ವೇದ, ಹಿರಣ್ಯಪಾಕ, ಸುವರ್ಣಪಾಕ, ಮಣಿಪಾಕ, ಧಾತುಪಾಕ, ಬಾಹುಯುದ್ಧ, ದಂಡಯುದ್ಧ, ಮುಷ್ಟಿಯುದ್ಧ, ಯುಷ್ಟಿಯುದ್ಧ, ಯುದ್ಧ, ನಿಯುರ್ದ್ಧ, ಜುದ್ದಾ ಇಂಜುದ್ದಾ, ಸೂತ್ರಕ್ರೀಡಾ, ನಾಲಿಕಾ ಕ್ರೀಡಾ, ವೃತ್ತಕ್ರೀಡಾ, ಧರ್ಮಕ್ರೀಡಾ, ಚರ್ಮಕ್ರೀಡಾ, ಪತ್ರಛೇದ್ಯ, ಕಟಕಛೇದ್ಯ, ಸಜೀವ - ನಿರ್ಜೀವ, ಶಕುನರುತ".[೭]

ಇವು ಅಸುರುಕುಮಾರರಿಗೆ ಪಾರಂಪರಿಕ ಅಭ್ಯಾಸ ಕ್ರಮವಾಗಿದೆ. ಕೆಲವು ಕಥಗಳಲ್ಲಿ ಮಾತ್ರ ಅಕ್ಷರ ಬರೆಯುವುದು. ಆಲೇಖ ಬಣ್ಣ ಬರೆಯುವುದು ಗಣಿತ ಗಾಂದರ್ವ ಸಂಗೀತ ಮತ್ತು ನೃತ್ಯ, ಚಿತ್ರಕರ್ಮ ಚಿತ್ರ ತೆಗೆಯುವುದು ಪತ್ರಚ್ಛೇದ್ಯ – ಎಲೆಗಳನ್ನು ಕತ್ತರಿಸುವ ವಿದ್ಯಾಸ, ಹಾಡುವುದು ಮುಂತಾದ ಪಠ್ಯಪೂರಕ ಚಟುವಟಿಕೆಗಳ ಉಲ್ಲೇಖ ಕಂಡುಬರುತ್ತದೆ.

ಪಾರಂಪರಿಕವಾಗಿ ವಿವಿಧ ಸಂಗೀತ ಸಾಧನಗಳ ಕೆಲವು ಪಟ್ಟಿಗಳು, ವಡ್ಡರಾಧನೆಯ ಕಥೆಗಳಲ್ಲಿ ತಿರುತಿರುಗಿ ಬರುವವು. ಪಟು, ಪಟಹ, ಪಣವ, ತುಣವ, ಭಂಭಾ, ಮರ್ದಳೆ, ಝುಲ್ಲರಿ, ಮುಕುಂದ ಶಂಖ, ವಂಶಪಾಳ ಭೇರಿ, ಮೃದಂಗ, ವೀಣಾ ಕಹಳೆ ಈ ಮುಂತಾದ ಸಂಗೀತ ಸಾಧನಗಳಲ್ಲಿ ಕೆಲವಾದರೂ ಆಗ ಪ್ರತ್ಯಕ್ಷವಾಗಿ ಬಳಕೆಯಲ್ಲಿದ್ದು ಅವುಗಳನ್ನು ಕಲಿಸುತ್ತಿದ್ದರು.

ಈ ರೀತಿಯಾಗಿ ವಡ್ಡಾರಾಧನೆಯ ಕಥೆಗಳಲ್ಲಿ ಪಠ್ಯ ಪಠ್ಯಪೂರಕ ಮತ್ತು ಪಠ್ಯೇತರ ಚಟುವಟಿಕೆಗಳ ಉಲ್ಲೇಖ ಅಧ್ಯಯನದಿಂದ ಉಲ್ಲೇಖಕಂಡುಬರುತ್ತವೆ.

### ೪.೭ ವಡ್ಡಾರಾಧನೆಯಲ್ಲಿ ಶೈಕ್ಷಣಿಕ ಪಠ್ಯವಾಗಿ : ಜೈನದರ್ಶನದ ತತ್ವಗಳು:

**ಜ್ಞಾನ ದರ್ಶನ :**

ಜೈನದರ್ಶನವು ಅಂಶಿಕ ಜ್ಞಾನವನ್ನು ನಯ ಎಂದು ಕರೆಯುತ್ತವೆ. ಈ ಅಂಶಿಕ ಜ್ಞಾನಗಳ ತತ್ವಗಳನ್ನು ಸಪ್ತಭಂಗೀನಯ ಎನ್ನಲಾಗಿವೆ.

ಪೂಜೆ : ಸಿದ್ದ ಅರ್ಹತ್ (ಅರಿಹಂತ ತೀರ್ಥಂಕರು) ಆಚಾರ್ಯ, ಉಪಧ್ಯಾಯ ಮತ್ತು ಸಾಧು ಎಂದು ಪಂಚಮೇಷ್ಟಗಳು ಜೈನರು ಪೂಜಿಸುವ ಐದು ವರ್ಗದ ಜನರು, ಇವರು ಆತ್ಮ-ಸಾಧನೆಯ ಐದು ಘಟ್ಟಗಳನ್ನು ಪ್ರತಿನಿಧಿಸುತ್ತಾರೆ.

ಗ್ರಹಸ್ಥನು ಮಾಡುವ ಪೂಜೆ 'ದ್ರವ್ಯಪೂಜೆ' ದ್ರವ್ಯ ಎಂದರೆ ಜಲ, ಗಂಧ, ಅಕ್ಷತೆ, ಪುಷ್ಪ, ಚರುದೀಪ, ಧೂಪ ಮತ್ತು ಫಲ ಮುನಿಗಳು ಮಾಡುವ ಪೂಜೆ ಭಾವಪೂಜೆ ಅಂದರೆ ಮೇಲೆ ತಿಳಿಸಿದ ಯಾವುದೇ ದ್ರವ್ಯವಿಲ್ಲದೆ ಬರಿಯ ಭಾವನೆಯಲ್ಲಿಯೇ ಪೂಜಿಸುವುದು.

ಜೈನ ಸಿದ್ಧಾಂತದ ಪ್ರಕಾರ ಒಟ್ಟು ಮೂರು ಪ್ರಮಾಣಗಳಿವೆ ಪ್ರತ್ಯಕ್ಷ, ಅನುಮಾನ ಶಬ್ದ (ಪುರಾವೆ).

ಜೈನ ಸಿದ್ಧಾಂತದ ಪ್ರಕಾರ ಜ್ಞಾನವೆ ಐದು ರೂಪಗಳಲ್ಲಿ ದೊರೆಯುತ್ತದೆ.

೧. "ಮತಿಜ್ಞಾನ (ಗ್ರಹಣಾಜ್ಞಾನ)
೨. ಶೃತಿಜ್ಞಾನ (ಲಿಖಿತ ಜ್ಞಾನ)
೩. ಅವಧಿ ಜ್ಞಾನ (ಅತೀಂದ್ರಿಯ ಜ್ಞಾನ)
೪. ಮನಃ ಪರಾಯ ಜ್ಞಾನ (ಭಾವ ಪ್ರೇರಣೆ)
೫. ಕೇವಲ ಜ್ಞಾನ (ಅನಂತ ಪರಿಪೂರ್ಣ) ಪಾರಮಾರ್ಥಿಕ ಜ್ಞಾನ" [೧೦]

೧. **ಮತಿಜ್ಞಾನ** : ಈ ಜ್ಞಾನವು ಸಾಮಾನ್ಯ ಅರಿವಾಗಿದ್ದು ಇದರಲ್ಲಿ ಇಂದ್ರಿಯ ಗ್ರಹಣೆ ಸ್ಮರಣೆ ಮತ್ತು ಅನುಮಾನಗಳಿದ್ದು ಇದನ್ನು ಮನಸ್ಸಿನ ಸಾಮನ್ಯ ಕ್ರಿಯೆಗಳಿಂದ ಹಾಗೂ ಇಂದ್ರಿಯಗಳಿಂದ ಪಡೆಯುವುದಾಗಿದೆ.

೨. **ಶೃತಿಜ್ಞಾನ**: ಈ ಜ್ಞಾನವು ಕೂಡ ಪರೋಕ್ಷವೆಂದೇ ಪರಿಗಣಿಸಿದ್ದಾರೆ. ಏಕೆಂದರೆ ಈ ಜ್ಞಾನವು ನಮ್ಮನ್ನು ಅವಲಂಬಿಸದೆ ಋಷಿಗಳು ಲಿಖಿತ ರೂಪದಲ್ಲಿ ಬರೆದಿರುವ ಪುರವೆಗಳನ್ನು ಶಬ್ದಗಳನ್ನು ಅವಲಂಬಿಸಿವೆ, ತೀರ್ಥಂಕರ ಉಪದೇಶ ಇದೆ ಗುಂಪಿಗೆ ಸೇರುತ್ತದೆ.

೩. **ಅವಧಿಜ್ಞಾನ** : ಈ ಜ್ಞಾನವು ಮುನಿಗಳು ಹೊಂದಿದ್ದಂತಹ ಮಾನಸಿಕ ಶಕ್ತಿಯನ್ನು ಅವಲಂಬಿಸಿದ್ದು. ಇದು ಕಾಲ ಹಾಗೂ ಅಂತರವನ್ನು ಮೀರಿದ್ದಾಗಿದೆ. ಈ ಜ್ಞಾನವು ಗ್ರಹಣೆಗೆ ನಿಲುಕದ ವಿಚಾರಗಳಿಗೆ ಸಂಬಂಧಿಸಿದ್ದು ಇದು ಯಾವ ವಸ್ತುವಿನ ಮೇಲೂ ಅವಲಂಬಿತವಾಗಿರುವುದಿಲ್ಲ. ಇದು ಇಂದ್ರಿಯಾಧಾರಿತವಲ್ಲವಾದರೂ ಇದನ್ನು ಪ್ರತ್ಯಕ್ಷ ತಾಕ್ಷಣಿಕ ಅತೀಂದ್ರಿಯ ಜ್ಞಾನ ಎನ್ನುವರು.

೪. **ಮನಃಪರಾಯಜ್ಞಾನ** : ಈ ಜ್ಞಾನ ನೇರವಾಗಿದ್ದು ಇದರಿಂದ ಬೇರೆಯವರ ಮನಸ್ಸು ಅರಿಯಬಹುದಾಗಿದೆ. ಇದು ಮನುಷ್ಯನ ಅಂತರ್ ದೃಷ್ಟಿ ಅಥವಾ ಒಳಅರಿವನ್ನು ಒಳಗೊಂಡಿದೆ. ಮಾನವನು ತನ್ನ ಉತ್ತಮ ನಡತೆಯಿಂದ (ಸಮ್ಯಕ್ ಚರಿತೆ)

ಬೇರೆಯವರ ಮನದೊಳಗೆ ಹೊಕ್ಕು ಅವರ ಭಾವನೆ ಆದಕ್ಕೆ ಸಂಬಂಧಿಸಿದ ಜ್ಞಾನವನ್ನು ಹೊರಗೆಡುವ ಶಕ್ತಿಗೆ ಮನ್ ಪರಾಯಜ್ಞಾನ ಎನ್ನುವರು. ಇದು ಭಾವನಾತ್ಮಕ ಪ್ರಭಾವದಿಂದ ಒಂದು ಮನಸ್ಸು ದೂರದಲ್ಲಿರುವ ಇನ್ನೊಂದು ಮನಸ್ಸಿನ ಮೇಲೆಉಂಟು ಮಾಡುವ ಕ್ರಿಯೆ.

೫. **ಕೇವಲ ಜ್ಞಾನ**: ಈ ಜ್ಞಾನವು ಉತ್ಕೃಷ್ಟದ ಮಟ್ಟದ ಜ್ಞಾನವಾಗಿದೆ. ಇದನ್ನು ಹೊಂದಿದವನು ಅಜ್ಞಾನವೆಂಬ ಬಂಧನದಿಂದ ಮುಕ್ತಿಹೊಂದಿ ಅತ್ಯಂತ ಪವಿತ್ರ ಮತ್ತು ನಿರ್ಮಲ ಆತ್ಮವನ್ನು ಹೊಂದುವರು. ಇಂದ್ರಿಯ ಮತ್ತು ಮನಸ್ಸಿನ ಮೇಲೆ ಅವಲಂಬನವಾಗದೆ ಸರ್ವ ಸ್ವತಂತ್ರವಾಗಿದೆ. ಭಾವನೆ ಮತ್ತು ಅನುಭವಗಳಿಂದ ಇದರ ಇರುವಿಕೆಯನ್ನು ಗುರುತಿಸಬಹುದು.

ಈ ಮೇಲಿನ ಐದು ತರಹ ಜ್ಞಾನಗಳಲ್ಲಿ ಮೊದಲೆರಡು ಜ್ಞಾನವು ಮಧ್ಯವರ್ತಿ ಜ್ಞಾನವಾಗಿದ್ದು ಯಾವ ಸಾಮಾನ್ಯ ಮನುಷ್ಯನು ಕೂಡ ಹೊಂದಬಹುದು ಮೂರನೇ ಹಾಗೂ ನಾಲ್ಕನೆಯ ಜ್ಞಾನಗಳು ತಾಕ್ಷಣಿಕವಾಗಿದ್ದು ಮನೋಬಲ ಹಾಗೂ ಅಚಲ ಕೇಂದ್ರಿಕರಣದಿಂದ ಪಡೆಯಬಹುದು. ಕೊನೆಯ ಹಾಗೂ ಅತ್ಯಂತ ಶ್ರೇಷ್ಠ ಜ್ಞಾನವಾದ ಕೇವಲ ಜ್ಞಾನವನ್ನು ಮಾತ್ರ ಅತ್ಯಂತ ಉಜ್ವಲ ಆತ್ಮ ಧ್ಯಾನದ ಮೂಲಕ ಗಳಿಸಬಹುದಾಗಿದೆ.

**ತತ್ವಜ್ಞಾನ :**



ಜೈನರು ಇಡೀ ವಿಶ್ವವು ಶಾಶ್ವತವಾದ ಎರಡು ತತ್ವಗಳು (ಪದಾರ್ಥಗಳು) ಸೇರಿ ಉಂಟಾಗಿದೆ ಎಂದು ನಂಬುತ್ತಾರೆ. ಆ ಎರಡು ತತ್ವಗಳೇ ಜೀವ ಮತ್ತು ಅಜೀವ. ಇವುಗಳನ್ನು 'ಚರಮ ತತ್ವಗಳು' ಎನ್ನುವರು.

ಜೀವ: ಚೇತನ ದ್ರವ್ಯವನ್ನು 'ಜೀವ' ಎನ್ನುವರು. ಚೈತನ್ಯವು ಜೀವದ ಲಕ್ಷಣವಾಗಿದೆ. ಜೈನದರ್ಶನವು ಜೀವವನ್ನು ಮಧ್ಯಮ ಪರಿಣಾಮವೆಂದು ನಂಬುತ್ತದೆ. ಜೀವದ ವಿಷಯದಲ್ಲಿ ಇದು ಅದ್ವೈತಗಳಂತ ವಿಭುವೆಂದಾಗಲಿ, ದ್ವೈತಗಳಂತೆ 'ಅಣು'ವೆಂದಾಗಲಿ ಒಪ್ಪದೆ ಮಾಧ್ಯಮ ಮಾರ್ಗ ಒಪ್ಪುತ್ತದೆ. ಅಂದರೆ ಜೀವವು ಆತ್ಮವು ನಿತ್ಯವಾಗಿದ್ದರೂ ಪರಿಣಾಮ ಶೀಲವಾದದು. ಅದರ ಜ್ಞಾನ ಇಂದ್ರಿಗಳಿಂದ ಆಗುವುದಿಲ್ಲ. ಸ್ವಯಂ ವೇದನೆ, ಪ್ರತ್ಯಕ್ಷ ಮತ್ತು ಅನುಮಾನಗಳಿಂದ ತಿಳಿಯುವುದಾಗಿದೆ.

**ಅಜೀವ :**

ಅಜೀವದ ಲಕ್ಷಣ ಜಡತ್ವ, ಅಜೀವ ವಸ್ತುಗಳು ಅಸ್ಪಷ್ಟ ಮತ್ತು ನಿತ್ಯವಾದವು. ಇದು ಐದು ಬಗೆಯಾಗಿದೆ. ಪುದ್ಗಲ, ಧರ್ಮ, ಅಧರ್ಮ, ಆಕಾಶ ಮತ್ತು ಕಾಲ ಇವುಗಳಲ್ಲಿ

'ಕಾಲ'ವೊಂದನ್ನು ಬಿಟ್ಟು ಉಳಿದವನ್ನು ಜೀವದೊಂದಿಗೆ ಸೇರಿಸಿ 'ಪಂಚಾಸ್ತಿಕಾಯಗಳು' ಎನ್ನುವರು ಜೀವ ಹಾಗೂ ಅಜೀವದ ಐದು ದ್ರವ್ಯಗಳನ್ನು ಸೇರಿಸಿ ಷಡದ್ರವ್ಯಗಳು ಎನ್ನುವರು.

**ಪುದ್ಗಲ :**

ಪುದ್ಗಲವು ಅಣು ಹಾಗು ಸಂಘಾತ ಎಂದು ಎರಡು ಬಗೆ ಇದನ್ನು ಪ್ರಕೃತಿ ಎಂದು ಕರೆಯುವರು, ಸ್ಪರ್ಶ, ರಸ, ಗಂಧ ಮತ್ತು ವರ್ಣ ಎಂದು ನಾಲ್ಕುಗುಣಗಳನ್ನು ಪುದ್ಗಲವು ಹೊಂದಿದೆ.

**ಧರ್ಮ:**

ಇದು ಚಲನ ತತ್ವವಾಗಿದೆ, ಧರ್ಮವು ಸ್ವಯಂ ಜೀವದ ಗತಿಯನ್ನು ಪ್ರೇರಣೆ ಮಾಡುವುದರಲ್ಲಿ ಅಸಮರ್ಥವಾಗಿರುತ್ತದೆ. ನೀರು ಮೀನಿನ ಚಲನೆಗೆ ಸಹಾಯ ಮಾಡುವಂತೆ ಜೀವದ ಗಮನಕ್ಕೆ ಧರ್ಮವು ಸಹಾಯ ಮಾಡುತ್ತದೆ.

**ಅಧರ್ಮ:**

ಜೀವದ ಸ್ಥಿತಿಗಾಗಿ ಅಧರ್ಮದ ಕಲ್ಪನೆಯ ಸ್ವೀಕೃತವಾಗಿದೆ.

**ಆಕಾಶ :**

ಇದು ಉಳಿದ ಎಲ್ಲಾ ಪದಾರ್ಥಗಳ ಅಸ್ತಿತ್ವಕ್ಕೆ ಸ್ಥಳವನ್ನು ಕಲ್ಪಿಸಿಕೊಡುತ್ತದೆ. ಅನಂತವಾಗಿದ್ದು ಇತರ ವಸ್ತುಗಳು ಅದರ ಒಂದು ಭಾಗವನ್ನು ಮಾತ್ರ ಆಕ್ರಮಿಸಿವೆ. ಈ ಭಾಗವೇ 'ಲೋಕ ಅಕಾಶ' ಉಳಿದ ಶೂನ್ಯಭಾಗವೇ 'ಅಲೋಕ ಆಕಾಶ'.

**ಕಾಲ :**

ಕಾಲವು ಇತರ ಎಲ್ಲಾ ವಸ್ತುಗಳಲ್ಲೂ ವ್ಯತ್ಯಾಸ ಅಥವಾ ರೂಪಾಂತರ ತರುತ್ತದೆ ಮತ್ತು ಅವುಳಿಗೆ ತನ್ನಲ್ಲಿ ವ್ಯಾಪ್ತಿಯನ್ನು ಕಲ್ಪಿಸುತ್ತದೆ, ಕಾಲವು ತನ್ನಷ್ಟಕ್ಕೆ ತಾನು ಅನಾದಿ ಮತ್ತು ಅನಂತ ಕಾಲವಿಲ್ಲದೆ ವಸ್ತುಬದಲಾವಣೆಯನ್ನು ಚಿಂತಿಸುದಾಗಲಿ, ಗ್ರಹಿಸುವುದಕ್ಕಾಗಲಿ ಆಗುವುದಿಲ್ಲ.

**ಸಪ್ತ ತತ್ವಗಳು:**

ಜೀವ, ಅಜೀವ, ಅಸ್ರಮ. ಬಂಧ, ಸಂವರ, ನಿರ್ಜರ ಮತ್ತು ಮೋಕ್ಷ ಇವೆ ಸಪ್ತತತ್ವಗಳು.

**ಆಸ್ರವ :**

ಎಂದರೆ ಆತ್ಮನ ಪರಿಣಾಮಕ್ಕೆ ಅನುಗುಣವಾಗಿ ಕರ್ಮಾಣುಗಳ ಬರುವಿಕೆ ಎಂದರ್ಥ ಜೀವವು ಪಾಪಸ್ಥಿತಿಯಲ್ಲಿರುವಾಗ. ಅಂದರೆ ರಾಗಾ ದ್ವೇಷಾದಿಗಳ ಪ್ರಚೋದನೆಗೆ ಸಿಲುಕಿ ಕಾಯಾ, ವಾಚಾ, ಮನಸಾ ಕಲುಷಿತವಾದಾಗ ಈ ಕರ್ಮವು ಜೀವನವನ್ನು ಆವರಿಸುತ್ತದೆ ಇದರಿಂದ ಕಾರ್ಮಣ ಶರೀರ ಉತ್ಪನ್ನವಾಗುತ್ತದೆ.

**ಬಂಧ :**

ಕರ್ಮಾಣುಗಳಿಂದ ಆತ್ಮನು ಬಂದಿತವಾಗುವುದೇ 'ಬಂಧ' ಕರ್ಮಾವು ಒಳಕ್ಕೆ ಹರಿಯುವಾಗ ಹುಟ್ಟುವ ಶಕ್ತಿಗಳಿಗೆ ಅನುಗುಣವಾಗಿ ಕಾರ್ಯದ ಶರೀರವು ಜೀವವನ್ನು ಎಂಟು ಭಿನ್ನ ರೀತಿಯಲ್ಲಿ ಬಂಧಿತ್ತವಾಗಿದ್ದು. 'ಅಷ್ಟಕರ್ಮಗಳು' ಎನ್ನುವರು.

೧. **"ಜ್ಞಾನಾವರಣೀಯಕರ್ಮ** : ಇದು ಜ್ಞಾನವನ್ನು ಮರೆ ಮಾಡುತ್ತದೆ.

೨. **ದರ್ಶನಾವರಣೀಯ ಕರ್ಮ** ; ಇದು ದರ್ಶನವನ್ನು ಮರೆ ಮಾಡುತ್ತದೆ.

೩. **ಮೋಹನಿಯಕರ್ಮ** : ಇದು ರಾಗ ಮೋಹಗಳ ರೂಪದಲ್ಲಿ ಭ್ರಾಂತಿಯನ್ನು ಹುಟ್ಟಿಸುತ್ತವೆ.

೪. **ವೇದನೀಯ ಕರ್ಮ** : ಇದು ನೋವು, ನಲಿವುಗಳನ್ನು ಉಂಟು ಮಾಡುತ್ತದೆ.

೫. **ಆಯಷ್ಯಕರ್ಮ** : ಇದು ಬಾಳಿನ ಅವಧಿಯನ್ನು ನಿರ್ಧರಿಸುತ್ತದೆ.

೬. **ನಾಮಕರ್ಮ**: ಇದು ವ್ಯಕ್ತಿತ್ವಕ್ಕೆ ಸಂಬಂಧಿಸಿದ ದೇಹ. ಇಂದ್ರಿಯ ಆರೋಗ್ಯ ವರ್ಚಸ್ಸು ಇತ್ಯಾದಿಗಳನ್ನು ಒದಗಿಸುತ್ತದೆ". [೧೧]

೭. **ಗೋತ್ರಕರ್ಮ** : ಇದು ಜನನ ಕಾಲದಲ್ಲಿನ ಸಾಮಾಜಿಕ ಸ್ಥಾನಮಾನಗಳನ್ನು ನಿರ್ಧರಿಸುತ್ತದೆ.

೮. **ಅಂತಕಾರ್ಯ ಕರ್ಮ**: ಇದು ಸದ್ಗುಣಗಳು ಮತ್ತು ಸಾಮರ್ಥ್ಯಗಳನ್ನು ಅರಿತುಕೊಳ್ಳಲು ಅಡ್ಡಿ ಆತಂಕಗಳನ್ನು ತಂದು ಹಾಕುತ್ತದೆ.

**ಸಂವರ :**

ಹೊಸ ಕರ್ಮಗಳನ್ನು ತಡೆಹಿಡಿಯುವುದೇ 'ಸಂವರ' ದೈಹಿಕ ಹಾಗೂ ಮಾನಸಿಕ ಕರ್ಮಗಳನ್ನು ಸರಿಯಾಗಿ ನಿಯೋಜಿಸುವುದರಿಂದ ಹೊಸದಾಗಿ ಹರಿದು ಬರುವ ಕರ್ಮಗಳನ್ನು ನಿಲ್ಲಿಸಬಹುದು.

**ನಿರ್ಜರ :**

ಕರ್ಮಗಳನ್ನು ಕಿತ್ತಸೆಯುವುದೇ ನಿರ್ಜರ, ಕೆಲವು ಕಠಿಣ ವ್ರತಗಳಿಂದ ಸಂಚಿತ ಕರ್ಮಗಳನ್ನು ನಾಶಪಡಿಸುವುದಾಗಿದೆ. ಇದನ್ನು ಸಾಧಿಸುವುದರಿಂದ ಆತ್ಮವು ಶಾಶ್ವತವಾಗಿ ಸ್ವತಂತ್ರವಾಗುತ್ತದೆ. ಪುನಃಜನ್ಮ (ಭವಚಕ್ರ)ವು ನಿಲುಗಡೆಯಾಗುತ್ತದೆ.

**ದೋಷ :**

ಆತ್ಮವು ಕರ್ಮ ಮತ್ತು ಪುನರ್ಜನ್ಮ ಬಂಧನದಿಂದ ಪಾರಾಗುವುದೇ ದೋಷ. ಜೈನ ದರ್ಶನದ ಪ್ರಕಾರ ತ್ರೈರತ್ನಗಳ ಆಚರಣೆಯಿಂದ ಮೋಕ್ಷವು ಸಿದ್ಧಿಸುತ್ತದೆ.

ನವತತ್ವಗಳು ಅಥವಾ ನವಪದಾರ್ಥಗಳು ಮೇಲೆ ತಿಳಿಸಿದ ಸಪ್ತತತ್ವಗಳೊಂದಿಗೆ ಪುಣ್ಯ ಮತ್ತು ಪಾಪ ಎಂಬ ಎರಡು ತತ್ವಗಳು ಸೇರಿ ನವತತ್ವಗಳು ಎನಿಸುತ್ತವೆ.

**ಜೈನ ನೀತಿಶಾಸ್ತ್ರ:**

ಮೋಕ್ಷ ಮಾರ್ಗವೇ ಜೈನ ಧರ್ಮದ ಅತ್ಯಂತ ಪ್ರಮುಖವಾದ ಬೋಧನೆ ಸಮ್ಯಕ್ ದರ್ಶನ (ಸರಿಯಾದ ನಂಬಿಕೆ) ಸಮ್ಯಕ್ ಜ್ಞಾನ (ಸರಿಯಾದ ತಿಳುವಳಿಕೆ) ಮತ್ತು ಸಮ್ಯಕ್ ಚಾರಿತ್ರ್ಯ (ಸರಿಯಾದ ಆಚರಣೆ) ರತ್ನತ್ರಯಗಳೆಂದು ಕರೆಸಿಕೊಳ್ಳುವ ಇವುಗಳನ್ನು ಒಟ್ಟು ಸೇರಿ ಮೋಕ್ಷಮಾರ್ಗವಾಗಿದೆ. ಒಬ್ಬ ವ್ಯಕ್ತಿ ಮೋಕ್ಷ ಮಾರ್ಗದಲ್ಲಿ ಸಾಗಬೇಕಾದರೆ ಅವನಲ್ಲಿ ಮೂರು ಒಟ್ಟಿಗೆ ಸಂಗಮಿಸಿರಬೇಕೆಂದು ಎತ್ತಿಹಿಡಿಯುತ್ತದೆ. ಸರಿಯಾದ ನಂಬಿಕೆ, ತಿಳುವಳಿಕೆ ಆಚರಣೆಗಳೆಂಬ ಮೂರು ತತ್ವಗಳ ಮಿಶ್ರಣವಾದ ರತ್ನತ್ರಯಯೆಂಬ ತ್ರಿಗುಣ ಸರ್ವರೋಗಾಪಹಾರಿಯಾದ ಪ್ರತಿ ಜೀವನಕ್ಕೂ ಅಂಟಿ ನರಳಿಸುತ್ತಿರುವ ಸಾಂಸಾರಿಕ ದುಃಖವೆಂದು ವಿಶ್ವರೋಗವನ್ನು ಗುಣಪಡಿಸುತ್ತದೆ.

ಜೈನ ನೀತಿಶಾಸ್ತ್ರದ ಪ್ರಕಾರ ನೀತಿ ಶಿಕ್ಷಣ ಅಥವಾ ನೈತಿಕಾಚರಣೆಯು ಸಮ್ಯಕ್ತ್ವದ ಮಾರ್ಗ ಅಥವಾ ಧರ್ಮವು ರತ್ನತ್ರಯವನ್ನು ಒಳಗೊಂಡಿದೆ ಇವುಗಳಲ್ಲಿ ಯಾವುದಾದರೊಂದು ಇಲ್ಲದಿದ್ದರೆ ಧರ್ಮವು ಅಪೂರ್ಣವಾಗುತ್ತದೆ.

ಈ ಮೂರರಲ್ಲಿ ಮೊದಲನೆಯದಾದ ಸಮ್ಯಕ್ ದರ್ಶನ ಅಥವಾ ಸರಿಯಾದ ನಂಬಿಕೆಯು ಆಚರಣೆಯಲ್ಲಿ ಮೂಲಭೂತವಾದುದು ಮತ್ತು ಒಬ್ಬ ಜೈನನ ಧಾರ್ಮಿಕ ಜೀವನದ ಪ್ರಮುಖವಾದ ಪ್ರಾರಂಭ ಬಿಂದು. ಅತ್ತ-ಇತ್ತ ವಿಚಲಿತವಾಗದ ನಂಬಿಕೆ ಅಥವಾ ಶ್ರದ್ಧೆಯನ್ನು ಬೆಳಸಿಕೊಳ್ಳಬೇಕಾದರೆ ಮೂರು ರೀತಿಯ ಮೌಢ್ಯವನ್ನು ಎಂಟು ರೀತಿಯ ಮದ ಅಥವಾ ಅಹಂಕಾರವನ್ನು ತ್ಯಜಿಸಬೇಕು ಮೂರು ರೀತಿಯ ಮೌಢ್ಯ – ಅಥವಾ ಮೂರು ಮೂಢಗಳು. ಅವುಗಳೆಂದರೆ - ಲೋಕ ಮೂಢ, ದೇವಮೂಢ, ಮತ್ತು ಪಾಷಂಡಿ ಮೂಢ. ಮೊದಲನೆಯದು ಪವಿತ್ರವೆಂದ ನಂಬಿರುವ ಪುಣ್ಯ ನದಿಗಳಲ್ಲಿಮಿಂದರೇ ಬೆಟ್ಟಗಳನ್ನರಿದರೆ ಅಥವಾ ಬೆಂಕಿಯಲ್ಲಿ ನಡೆದರೆ ಮನುಷ್ಯ ಪವಿತ್ರನಾಗುತ್ತಾನೆ. ಎರಡನೆಯದು, ಮಾನುಷ್ಯಗುಣಗಳನ್ನೇ ಮಾನುಷ್ ರಾಗಭಾವಗಳನ್ನೇ ಪಡೆದಿರುವ ಪುರುಷ ಮತ್ತು ಸ್ತ್ರೀದೇವತೆಗಳ ಶಕ್ತಿ ನಂಬಿಕೆ ಇಡುವುದು ಅವುಗಳನ್ನು ಕೆಲವು ಸ್ವಾರ್ಥಲಾಭಗಳಿಗಾಗಿ ಅರ್ಚಿಸುವುದು ಈ ಮೌಡ್ಯವನ್ನು ಸೂಚಿಸುತ್ತದೆ.

ಮೂರನೆಯದು ಕಪಟ ಸನ್ಯಾಸಿಗಳಲ್ಲಿ ಭಕ್ತಿಯಿಟ್ಟು ಅವರ ಬೋಧನೆಯನ್ನು ಪರಮಸತ್ಯವೆಂದು ಒಪ್ಪಿಕೊಳ್ಳುವ ಮೌಢ್ಯವನ್ನು ಸೂಚಿಸುತ್ತದೆ.

ಈ ಮೂರು ರೀತಿ ಮೌಢ್ಯಗಳಿಂದಲೂ ಮುಕ್ತವಾಗುವುದು ಸಮ್ಯಕ್ ದರ್ಶನ. ಸಮ್ಯಕ್ ದರ್ಶನವಿರುವ ವ್ಯಕ್ತಿ ಎಂಟು ರೀತಿಯ ಮದಗಳಿಂದಲೂ ಮುಕ್ತನಾಗಿರಬೇಕು. ಈ ಎಂಟು ರೀತಯಾಗಿವೆ "೧. ಬುದ್ಧಿವಂತಿಕೆ ಮದ, ೨.ದೇವರ ಉತ್ಸವವನ್ನು ವಿಜೃಂಭಣೆಯಿಂದ ನಡೆಸುವ ಮದ, ೩.ಉತ್ತಮಕುಲದ ಮದ, ೪.ಜಾತಿಯ ಮದ, ೫.ದೈಹಿಕ ಅಥವಾ ಮಾನಸಿಕ

ಸಾಮರ್ಥ್ಯದ ಮದ, ೬.ಇಂದ್ರಜಾಲನ ಶಕ್ತಿಯ ಮದ, ೭.ತಪಸ್ಸಿನ ಯೋಗದ ಮದ, ೮.ದೇಹದ ಸೌಂದರ್ಯದ ಮದ.[೧೨]

ಈ ರೀತಿಯಾಗಿ ನಂಬಿಕೆ ಮತ್ತು ಜ್ಞಾನಗಳಿಂದ ಸಮನ್ವಿತಭಾವ ಐದು ವ್ರತಗಳನ್ನು ಆಚರಿಸಬೇಕು. ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ದುರಾಸೆ ಮತ್ತು ಅನಾವಶ್ಯಕ ಭೋಗಗಳಿಂದ ದೂರವಿರಬೇಕು. ಈ ಅಣುವ್ರತ್ತಗಳನ್ನು ಮಿತಿಗಳಿಲ್ಲದೆ ಆಚರಿಸಿದರೆ ದೊಡ್ಡ ನೈತಿಕ ನಿಯಮಗಳೆನಿಸುತ್ತವೆ. ಇವುಗಳನ್ನು ಯತಿಗಳಿಗೆ ವಿಧಿಸುತ್ತಾರೆ ಈ ಅಣುವ್ರತ್ತಗಳನ್ನು ಶಕ್ತಿಮೀರಿ ಆಚರಿಸಬೇಕೆಂದು ಜೈನಧರ್ಮತಿಳಿಸುತ್ತದೆ.

ಹೀಗೆ ಜೈನಯತಿಗಳಿಗೆ ವಿದ್ಯಾರ್ಜನೆ, ವ್ಯಕ್ತಿವಿಕಾಸ, ಧರ್ಮ ಸಾಂಗತ್ಯದ ಹಿನ್ನಲೆಯಲ್ಲಿ ಧಾರ್ಮಿಕ ಶಿಕ್ಷಣ ನೀಡುತ್ತಿದ್ದದು ತಿಳಿದುಬರುತ್ತದೆ.

## ಟಿಪ್ಪಣಿಗಳು

೧. ಆರ್.ಎಲ್. ಅನಂತರಾಮಯ್ಯ : ವಡ್ಡಾರಾಧನ ಕಥಾಲೋಕ : ಪುಟ ಸಂಖ್ಯೆ – ೨

೨. ಅದೇ : ಪುಟ ಸಂಖ್ಯೆ – ೧೧೩

೩. ಅದೇ : ಪುಟ ಸಂಖ್ಯೆ – ೧೫೫

೪. ಹಂ. ಪ. ನಾಗರಾಜಯ್ಯ : ವಡ್ಡಾರಾಧನೆ ಸಮಗ್ರ ಅಧ್ಯಾಯನ : ಪುಟ ಸಂಖ್ಯೆ – ೮೯-೯೦

೫. ಪಿ. ನಾಗರಾಜ : ಶಿಕ್ಷಣ ತತ್ವಶಾಸ್ತ್ರ ಮತ್ತು ಸಮಾಜ ಶಾಸ್ತ್ರ : ಪುಟ ಸಂಖ್ಯೆ - ೨೨೦

೬. ಟಿ. ಕೇಶವ ಭಟ್ಟ : ವಡ್ಡಾರಾಧನೆಯ ಗದ್ಯಾನುವಾದ : ಪುಟ ಸಂಖ್ಯೆ – ೩೨೨

೭. ಮಿರ್ಜಿಅಣ್ಣರಾಯ : ಭಾರತೀಯ ಸಂಸ್ಕೃತಿಗೆ ಜೈನ ಧರ್ಮದ ಕೊಡುಗೆ : ಪುಟ ಸಂಖ್ಯೆ – ೩೪೯

೮. ಎನ್. ಎಸ್. ಅನಂತರಂಗಾಚಾರ್ಯ : ವೈದಿಕ ಸಾಹಿತ್ಯ ಚರಿತೆ : ಪುಟ ಸಂಖ್ಯೆ – ೬೩-೬೪

೯. ಹಂ. ಪ. ನಾಗರಾಜಯ್ಯ : ವಡ್ಡಾರಾಧನೆ ಸಮಗ್ರ ಅಧ್ಯಾಯನ : ಪುಟ ಸಂಖ್ಯೆ – ೨೯೨

೧೦. ಎಚ್.ಎಮ್. ಶೈಲಾಜ ರಾಜೀವ ಪಿ. ಗುಂಡಾಳೆ : ಭಾರತೀಯ ತಾತ್ವಿಕ ಪರಂಪರೆ ಮತ್ತು ಶಿಕ್ಷಣ : ಪುಟ ಸಂಖ್ಯೆ – ೧೩೫

೧೧. ಅದೇ : ಪುಟ ಸಂಖ್ಯೆ – ೧೩೭ - ೧೩೮

೧೨. ಪಿ. ನಾಗರಾಜ : ಶಿಕ್ಷಣ ತತ್ವಶಾಸ್ತ್ರ ಮತ್ತು ಸಮಾಜ ಶಾಸ್ತ್ರ : ಪುಟ ಸಂಖ್ಯೆ - ೨೪೦

### ೫.೧ ಸುಕುಮಾರ ಸ್ವಾಮಿಯ ಕಥೆ :

ಪ್ರಾಚೀನ ಜೈನ ಸಾಹಿತ್ಯದಲ್ಲಿ ಉತ್ಕೃಷ್ಟವೆನಿಸಿದ ಕಥೆ ಇದಾಗಿರುವುದರಿಂದ ವಡ್ಡಾರಾಧನೆಯ ಕರ್ತೃವಾದ ಶಿವಕೋಟಾಚಾರ್ಯ ಈ ಕಥೆಗೆ ಮೊದಲ ಸ್ಥಾನವೆನ್ನಿತ್ತಿದ್ದಾನೆ ಇದರಲ್ಲಿ ವಾಯುಭೂತಿ ಎಂಬ ಮಂತ್ರಿಕುಮಾರನು. "ವಿದ್ಯಾಭ್ಯಾಸ ಮಾಡಿಸಿದ ಗುರುಗಳಿಗೆ ಗುರುದ್ರೋಹವೆಸಗಿ ರೋಗದಿಂದ ನರಳಿ ಸತ್ತು. ಕತ್ತೆ, ಹಂದಿ, ನಾಯಿ ಕುರುಡಿ, ಹೊಲತಿ ಜನ್ಮಗಳಲ್ಲಿ ಒಂದು ಧರ್ಮದ ಆಚರಣೆಯಿಂದ ನಾಗಶ್ರೀ ಎಂಬ ಬ್ರಾಹ್ಮಣ ಕನ್ಯೆಯಾಗಿ. ಅಲ್ಲಿಯೂ ಧರ್ಮಾಚರಣೆಯಿಂದ ಸತ್ತು ದೇವನಾಗಿ ಹುಟ್ಟಿ ಮುಂದಿನ ಜನ್ಮದಲ್ಲಿ ಸುಕುಮಾರ ಸ್ವಾಮಿಯಾಗಿ ಮೋಕ್ಷವನ್ನು ಪಡೆಯುವುದೇ ಕಥಾ ವಸ್ತು. ಹಲವು ಸ್ವಾರಸ್ಯಕರ ಉಪಕಥೆಗಳಿಂದ ಕೂಡಿದ ಕಥೆ ಇದು".[೧] ಕಥಾಕಾರನ ಮನದಲ್ಲಿದ್ದ ವಿಚಾರಗಳ ಮೇಲೆ ಬೆಳಕು ಚೆಲ್ಲುವ ಕೆಲವು ಉಲ್ಲೇಖಗಳು ಧಾರ್ಮಿಕ ಘಟನೆಗಳು. ಹೊಸ ಅಥವಾ ತರುಣ ಜೈನ ಮುನಿಗಳ ಅಭ್ಯಾಸ ಕ್ರಮ ಉಲ್ಲೇಖಿಸುತ್ತ. ೪ ಅನುಯೋಗದಲ್ಲಿದ್ದ ಇಡೀ ದಿಗಂಬರ ಅಧಿಕೃತ ಆಗಮವನ್ನು ಸುಧರ್ಮಾಚಾರರಿಂದ ಹೇಳಿಸುವರು ಅಲ್ಲದೆ ಕಥಾನಾಯಕನ ಮೊದಲಿನ ಆತ್ಮವಾದ ನಾಗಶ್ರೀಯೆ ಭಕ್ತ ಪ್ರತ್ಯಾಖ್ಯಾನ ವಿಧಿಯಿಂದ ರತ್ನತ್ರಯ ಸಾಧಿಸುತ್ತಾಳೆ. ಆಮೇಲೆ ಅವಂತಿ ಸುಕುಮಾರ ಸ್ವಾಮಿ ಪ್ರಾಯೋಗಮನ ವಿಧಿಯಿಂದ ಸನ್ಯಸನ ಸ್ವೀಕರಿಸುತ್ತಾನೆ. ಪ್ರಾಯೋಪಗಮನದಿಂದ ಯಾತನೆಗಳನ್ನು ಸಹಿಸಿದ ಪೌರಾಣಿಕ ಧಾರ್ಮಿಕ ಮಹಾಪುರುಷ ಚರಿತ್ರೆಗಳ ಸಾಮರೂಪ ಈ ಕಥಾಭಾಗದಲ್ಲಿದೆ.

ವಡ್ಡಾರಾಧನೆಯ ಕಥೆಗಳಲ್ಲಿ ಬರುವ ಆ ಕಾಲದ ಶೈಕ್ಷಣಿಕ ಪದ್ಧತಿ, ಬಹಳಷ್ಟು ಕಟ್ಟುನಿಟ್ಟಿನಿಂದ ಶ್ರದ್ಧೆಯಿಂದ, ಗುರುಕುಲದ ನಿಯಮಗಳನ್ನು ಪಾಲಿಸಿ ಕಷ್ಟಪಟ್ಟು ವಿದ್ಯಾಭ್ಯಾಸವನ್ನು ಕಲಿಯಬೇಕಿತ್ತು. 'ಸುಕುಮಾರ ಸ್ವಾಮಿಯ ಕಥೆ'ಯಲ್ಲಿ ಅಗ್ನಿಭೂತಿ, ವಾಯುಭೂತಿಯರು ತಮಗೆ ವಿದ್ಯೆಯನ್ನು ದಯಪಾಲಿಸಬೇಕೆಂದು ವಿದ್ಯಯನ್ನು ಪ್ರಾರಂಭಿಸಬೇಕಾದರೆ "ಒಳ್ಳತಪ್ಪ ದಿವಸ ವಾರ ವಿದ್ಯಾ ನಕ್ಷತ್ರ ದಿನದಂದು ಅಣ್ಣತಮ್ಮಂದಿರಾದ ಮಂತ್ರಿಯ ಮಕ್ಕಳು ಓಜರ್ಗ್ಗೆಱಗಿ ಪೋಡೆವಟ್ಟು ವಿದ್ಯಾ ಪ್ರಾರಂಭಗೆಯ್ದರ್ ಸೂರ್ಯಮಿತ್ರಂ ಆವರಂ ಇರುಳಂ ಪಗಲುಂ ನಿರಂತರಂ ನಿರ್ಬಂದದಿಂದ ಏಳೆಂಟು ವರುಷದಿಂದೊಳಗೆ ಓದಿಸಿ. ಅಂದರೆ ಹದಿನೆಂಟು ಧರ್ಮಶಾಸ್ತ್ರ, ಮೀಮಾಂಸಾ, ನ್ಯಾಯ, ವ್ಯಾಕರಣ, ಪ್ರಮಾಣ, ಛಂದಸ್ಸು, ಅಲಂಕಾರ, ನಿಘಂಟು, ಕಾವ್ಯ ನಾಟಕ ಚಾಣಾಕ್ಯ, ಸಾಮುದ್ರಿಕ, ಶಾಲಿಹೋತ್ರ, ಪಾಳಕಾವ್ಯ, ಹಾನಿತ ಚರಕ ಅಶ್ವಿನೀಯೋಗ ಬಾಹುಲ, ಸುಶ್ರಿತ, ಕ್ಷಾರ ಪಾನೀಯ ಮೊದಲಾದ ನರ ವೈದ್ಯಗಳಲ್ಲಿ ಜ್ಯೋತಿಷ ಮಂತ್ರವಾದ ಮುಂತಾದ ಶಾಸ್ತ್ರಗಳಲ್ಲಿ ಇಬ್ಬರು ಕಲಿತು ವಿದ್ವಾಂಸರಾದರು, ಎಂದಾಗ ಎಷ್ಟು ವಿದ್ಯೆಗಳನ್ನು ಕಲಿಸುತ್ತಿದ್ದರು. ಇಷ್ಟಕ್ಕೆ ಎಷ್ಟು ಕಾಲ ಹಿಡಿಯುತ್ತಿತ್ತು ಎಂಬ ಸಂಗತಿ ಗೊತ್ತಾಗುತ್ತದೆ, ಅಲ್ಲದೆ ವಿದ್ಯೆಯನ್ನು ಸಂಪಾದಿಸಿದ ಅಗ್ನಿಭೂತಿ- ವಾಯುಭೂತಿಯರು

ಗುರುಗಳ ಕಾಲಿಗೆ ಬಿದ್ದು ನಿಮ್ಮ ಅನುಗ್ರಹದಿಂದ ನಾವು ಎಲ್ಲಾ ಶಾಸ್ತ್ರಗಳನ್ನು ಕಲಿತು ಪಂಡಿತರಾದೆವು ಇನ್ನು ನಮ್ಮ ನಾಡಿಗೆ ಹಿಂದಿರುಗುತ್ತೇವೆ ಎಂದು ಹಿಂದುರುಗುವುದು. ಆಗಿನ ಕಾಲದ ಗುರುಪರಂಪರೆ ಮತ್ತು ಗುರುಗಳಿಂದ ಆಶಿರ್ವಾದಗಳನ್ನು ಪಡೆದು ಕೊಂಡು ಹೋಗುವುದು ಉತ್ತಮ ಸಂಸ್ಕಾರಗಳನ್ನು ತಿಳಿಸಿಕೊಡುತ್ತವೆ.

ಶೈಕ್ಷಣಿಕ ಪಠ್ಯವಾಗಿ ಈ ಕಥೆಯು ಅಂದರೆ ಶಿಕ್ಷಣ ಸಂಸ್ಥೆಗಳಲ್ಲಿ ಉಂಟಾದ ಒಂದು ವಿಶೇಷ ಸಂಗತಿ ಈ ಅಗ್ನಿಭೂತಿ - ವಾಯುಭೂತಿ ಕಥೆಯಿಂದ ತಿಳಿದು ಬರುತ್ತದೆ. ಅಗ್ನಿಭೂತಿ ವಾಯುಭೂತಿ ಇಬ್ಬರ ಮನೋಭಾವ ಬೇರೆಯಾದುದರಿಂದ ಬದುಕಿನಲ್ಲಿ ಅವರು ಯಾವ ರೀತಿಯಾಗಿ ತಮ್ಮ ಬದುಕಿನಲ್ಲಿ ಬೇರೆ ಬೇರೆ ಕ್ರಿಯಾಶೀಲಗಳಿಗೆ ಈಡಾದರೂ ಎಂಬ ಪಾತ್ರ ಬೇಧದಿಂದ ಫಲಭೇದ ಉಂಟಾಗುತ್ತದೆ ಎಂಬುದು ಪಾತ್ರಕ್ಕೆ ಸಮಬಂಧಿಸಿದಂತೆ ಗುಣ, ಸ್ವಭಾವ ಲಕ್ಷಣ ವ್ಯಕ್ತವಾಗುತ್ತದೆ, ವ್ಯಕ್ತಿ ಎಷ್ಟು ಬೇಡಿದರೇನು ಎಂಥ ಪ್ರಭಾವ ಬಿದ್ದರೇನು ಕಲಿತವರ ಸ್ವಭಾವ ಅವರನ್ನು ಬೇರೆ ಬೇರೆಯೇ ನಡೆಸುತ್ತದೆ ಎಂಬುದು ಅಧ್ಯಯನದಿಂದ ತಿಳಿದು ಬರುತ್ತದೆ.

ಯಾವುದನ್ನು ಶಿಕ್ಷಣ ಸಂಸ್ಕಾರ ಎನ್ನುತ್ತೇವೆ ಅವು ಇನ್ನಾವುದರ ಪ್ರಭಾವಕ್ಕೆ ಒಳಗಾಗಿ ವ್ಯಕ್ತಿಗಳ ಜೀವನವನ್ನು ರೂಪಿಸುತ್ತಾ ಹೋಗುತ್ತವೆ. ವ್ಯಕ್ತಿ ಕಲಿತ ವಿದ್ಯೆ ಅವರನ್ನು ಉತ್ತಮವಾಗಿಸಿ ನೆರವೂ ಸಾಧನವೂ ಆಗಿ ಅವರಿಗೆ ಸನ್ಮಾರ್ಗಕ್ಕೆ ದುರ್ಮಾರ್ಗಗಳಿಗೆ ಸಹಾಯಕವಾಗಬಹುದು. ಇಂಥದು ಪ್ರಧಾನವಾಗಿ ಧರ್ಮದ ಕಥೆಯಾಗಿ ಬೆಳೆದ ಜೀವಗಳ ದರ್ಶಿನ ಮಾಡಿಸುವಾಗ ಕರ್ಮವೇ ವ್ಯಕ್ತಿಯ ಶೀಲವನ್ನು ವೃತ್ತಿಯನ್ನು ಕ್ರಿಯಾವ್ಯಾಪಕವನ್ನು ನಡೆಸುತ್ತದೆ ಎಂದು ಗೊತ್ತಾಗುತ್ತದೆ.

ಇದೆ ಕಥೆಯಲ್ಲಿ ಸುಧರ್ಮಚಾರರಲ್ಲಿ ಸೂರ್ಯಮಿತ್ರನು ಜ್ಯೋತಿಷ್ಯಕಲಿಯಬೇಕೆಂಬ ಆಸೆಯಿಂದ ಬಂದಿದ್ದೇನೆಂದು ಹೇಳುವ ರೀತಿ ಗುರು ತನ್ನ ಶಿಷ್ಯನನ್ನು ಪರೀಕ್ಷಿಸುವುದು ಗುರುವಾದವನು ಶಿಷ್ಯನ ಮನಸ್ಸನ್ನು ಆಳವಾಗಿ ತಿಳಿದು ಒಂದೊಂದು ವಿದ್ಯೆಯನ್ನು ಹೇಳಿಕೊಡುತ್ತಾ ಇನ್ನೊಂದು ವಿಚಾರವಿದೆ ಅದು ದ್ರವ್ಯನುಯೋಗ ಅದನ್ನು ಕಲಿತ ಕೊಡಲೆ ಜ್ಯೋತಿಷ್ಯವನ್ನು ಹೇಳಿಕೊಡುತ್ತೇವೆ ದಿನ ವಾರ ನಕ್ಷತ್ರ ಮುಹೂರ್ತದಲ್ಲಿ ಸಿದ್ಧಾಂತವನ್ನು ಮನದಟ್ಟು ಮಾಡಿಕೊಂಡಾಗ ತನ್ನ ತಪ್ಪಿನ ಅರಿವಾಗಿ ಸನ್ಮಾರ್ಗವನ್ನು ಪಡೆದಾಗ ಗುರುಗಳನ್ನು ವಂಚಿಸಿ ತಪಸ್ಸು ಮಾಡಿದ್ದಕ್ಕಾಗಿ ಪ್ರಾಯಶ್ಚಿತ್ಯ ಮಾಡಿಕೊಳ್ಳುವುದು. ತಪಸ್ಸು ಮಾಡಿ ಆಚಾರನಾಗುವುದು ಮನಸ್ಸಿನ ಪರಿವರ್ತನೆ ತಿಳಿಸುವುದರ ಮೂಲಕ ಶೈಕ್ಷಣಿಕ ಪಠ್ಯವಾಗಿ ತಿಳಿಯುವುದಾಗಿದೆ.

## ೫.೨ ಸುಕೌಶಳ ಸ್ವಾಮಿಯ ಕಥೆ:

ಈ ಕಥೆಯು ಮುಖ್ಯವಾಗಿ ಸಿದ್ಧಾರ್ಥ ಸುಕೌಶಳ ಮತ್ತು ಶ್ರೀಕಾಂತಾ ಇವರ ಆತ್ಮಗಳ ಮತ್ತು ಕ್ರಮವಾಗಿ ಐದು, ಆರು ಜನ್ಮಗಳಿಗೆ ಸಂಬಂಧಿಸಿದೆ ಕಥೆಯ ಹೆಚ್ಚಿನ ಭಾಗವು ಧರ್ಮನಿರಕ್ಷ ಸ್ವರೂಪದಾಗಿದ್ದು. ಜಾತಿಸ್ಮರಣೆ ಅವಧಿಜ್ಞಾನ ಮೊದಲಾದ ಜೈನ ಪರಿಕಲ್ಪನೆಗಳ ಮೇಲೆ ಆಧಾರಿತವಾಗಿದೆ.

"ಈ ಕಥೆಯಲ್ಲಿ ಆತ್ಮಗಳ ಅನೇಕ ಜನ್ಮಗಳ ಕಥನದ ಕೆಳಗೆ ಜೈನ ಧರ್ಮದ ಕರ್ಮ ಸಿದ್ಧಾಂತ ಕಳಪ್ರವಾಹವಾಗಿ ಹರಿದು ಪ್ರತಿಯೊಬ್ಬ ವ್ಯಕ್ತಿಯ ಆತ್ಮತಾನು ಪ್ರೀತಿಸುವ ಅಥವಾ ದ್ವೇಷಿಸುವ ಪ್ರಾಣಗಳ ಅಥವಾ ವ್ಯಕ್ತಿಗಳ ಬಗ್ಗೆ ಪ್ರೇಮ ಮತ್ತು ದ್ವೇಷ ಭಾವನೆಯನ್ನು ತನ್ನ ಜತೆಗೆ ಮುಂದಿನ ಜನ್ಮದ ಕಡೆಗೆ ಒಯ್ಯುತ್ತದೆ ಎಂಬುದನ್ನು ಪ್ರತಿಪಾದಿಸುತ್ತಾನೆ. ಇದನ್ನು ಕಥಾಕಾರನಾದ ಶಿವಕೋಟಿ ಅನೇಕ ಉಪಕಥೆಗಳ ಮುಖಾಂತರ ಉದಾಹರಿಸುತ್ತಾನೆ".[೨]

ಈ ಪ್ರತಿಫಲ ಸಿದ್ಧಾಂತವನ್ನು ತನ್ನ ಪ್ರತಿಫಲ ತತ್ವದೊಂದಿಗೆ ಒಂದು ರೋಚಕ ಐತಿಹ್ಯದ ಮೂಲಕ ಉದಾಹರಿಸುತ್ತಾನೆ- ಸಿದ್ಧಾರ್ಥನ ಪಟ್ಟದರಸಿ ಜಯಾವತಿ ಜಿನದೀಕ್ಷೆ ಪಡೆದು ಪತಿಯನ್ನು ನಿಂದಿಸಿದ ಮತ್ತು ಜೈನಧರ್ಮವನ್ನು ಹಳಿದ ಫಲವಾಗಿ ಆರ್ತಧ್ಯಾನದಲ್ಲಿ ಮರಣಹೊಂದಿ ಹೆಣ್ಣು ಹುಲಿಯಾಗಿ ಹುಟ್ಟುತ್ತಾಳೆ. ಅಲ್ಲದೆ ಜಯಾವತಿಯ ಮಗ ಸುಕೌಶಳ ಸ್ವಾಮಿಯು ಮುನಿಯಾದ ತಂದೆಯ ಮುಖವನ್ನು ನೋಡದಂತೆ ತೆಗೆದುಕೊಂಡ ಎಲ್ಲ ದಕ್ಷತೆಗಳು ನಿರುಪಯೋಗವಾಗುವುದರಲ್ಲಿ ಕರ್ಮಸಿದ್ಧಾಂತದ ಸರ್ವಶಕ್ತಿ ಕಂಡುಬರುತ್ತದೆ. ಈ ಪ್ರಕಾರವಾಗಿ ಕರ್ಮಸಿದ್ಧಾಂತದ ಕ್ರಿಯಾಚರಣೆ ಮತ್ತು ಸರ್ವಶಕ್ತಿ ಇವು ಕಥೆಯಲ್ಲಿ ಕಂಡುಬರುತ್ತವೆ. ಸುಕೌಶಳ ಮುನಿಯು ತನ್ನನ್ನು ಆವರಿಸುವ ಉಪಸರ್ಗ ಪರಿಷಹಗಳನ್ನು ಶಾಂತವಾಗಿ ಸಹಿಸಿ ರತ್ನತ್ರಯ ಸಾಧಿಸುವುದು. ಇತ್ಯಾದಿ ಅಂಶಗಳನ್ನೆ ಕಥಾಕಾರನಿಂದ ವಾಡಿಕೆಯಂತೆ ವಿವರಿಸಲಾಗಿದೆ.

ಶೈಕ್ಷಣಿಕ ಪಠ್ಯವಾಗಿ ಈ ಕಥೆಯು ಕರ್ಮಸಿದ್ಧಾಂತದ ವಿವರಣೆ ರತ್ನತ್ರಯಗಳ ಸಾಧನೆ ಉಪಸರ್ಗಗಳ ಪರಿಷಹಗಳನ್ನು ತಿಳಿಯಪಡಿಸುತ್ತದೆ.

## ೫.೩ ಗಜಕುಮಾರನ ಕಥೆ :

ಇದೊಂದು ಚಿಕ್ಕ ಕಥೆಯಾಗಿದ್ದು, "ನೀತಿಗೆಟ್ಟು ಬಾಳಿದ ವ್ಯಕ್ತಿಯೊಬ್ಬನು ಮತ್ತು ಮಹಾಯೋಗಿಯಾದಾಗ ಪೂರ್ವದ್ವೇಷದಿಂದಾಗಿ ಪಟ್ಟಭವನೆ ಮತ್ತು ಸಹನೆ ಈ ಕಥೆಯಲ್ಲಿ ರೋಮಾಂಚಿತವಾಗಿ ವರ್ಣಿತವಾಗಿದೆ".

ಸುರಟನಾಡಿನ ರಾಜ ವಿಷ್ಣು ಇತನ ತಂದೆ ವಸುದೇವ ಆತನ ಹೆಂಡತಿ ಗಾಂದರ್ವತ್ತೆಯಲ್ಲಿ, ಗಜಕುಮಾರ ಜನಿಸುತ್ತಾನೆ, ಇತ ಶೂರನಾಗಿರುವುದರಿಂದ. ಸೂರದತ್ತನಾಡಿನ ಪೌದನಪುರದ ಅರಸ ಅಪರಾಜಿತನನ್ನು ಗೆದ್ದು ತಂದವರಿಗೆ ಬೇಕಾದನ್ನು ಕೊಡುತ್ತೇನೆಂದು ಡಂಗೂರ ಸಾರಿದಕ್ಕಾಗಿ, ಗಜಕುಮಾರನು ಆತನನ್ನು ಸೋಲಿಸಿ ತಂದು ಒಪ್ಪಿಸುತ್ತಾನೆ. ಆತ ತನ್ನ ಇಷ್ಟವಾಗಿ ಹನ್ನೆರಡು ವರ್ಷ ಸ್ತ್ರೀಯರೊಡನೆ ಇಚ್ಚೆಯಂತೆ ಬಾಳುವಾಗ ಆ ಪಟ್ಟಣದ ಸುವರ್ಣಕಾರನಾದ ಪಂಗಳನ ಮಡದಿಯೊಂದಿಗೆ ಸುಖಿಸುತ್ತಿದ್ದು. ಸುವರ್ಣ ಕಾರ ಮನಸ್ಸಿನಲ್ಲಿ ದುಃಖಪಟ್ಟು ಸಮ್ಮನಿದ್ದನು.

ಒಂದು ಸರೆ ಸುಮವರಣ ದ್ವಾರವತಿಗೆ ಬಂದಾಗ ಗಜಕುಮಾರನು ಉಪದೇಶವನ್ನು ಕೊಡುತ್ತಿದ್ದ ಅರಿಷ್ಟ ನೇಮಿ ಭಟಾರರ ಧರ್ಮ ವಿಚಾರದ ಉಪದೇಶದಿಂದಾಗಿ ಗಜಕುಮಾರರಲ್ಲಿ ವೈರಾಗ್ಯವುಂಟಾಗಿ ಹನ್ನೆರಡು ವರ್ಷ ತಪಸ್ಸುಮಾಡಿ ಸಂಚರ ಮಾಡುತ್ತಾ ದ್ವಾರಾವತಿ ಬಂದಾಗ ಪಂಗಳನೆಂಬುವವನು ತನ್ನ ಮಡದಿಯೊಂದಿಗೆ ಇದ್ದ ಪೂರ್ವ ಸಂಬಂದವನ್ನು ನೆನೆದು ವೈರತ್ವದಿಂದ ಗಜಕುಮಾರ ಮುನಿಯನ್ನು ಎದೆಯಿಂದ ಹೊಕ್ಕಳದವರೆಗೆ ಸೀಳಿ, ಕಬ್ಬಿಣದ ಮೊಳೆಗಳಿಂದ ಜಡಿದನು. ಗಜಕುಮಾರ ಸ್ವಾಮಿಯು ಆತನಿಗೆ ಕ್ಷಮೆ ತೋರಿಸಿ ಧರ್ಮದ್ಯಾನ, ಶುಕ್ಲದ್ಯಾನದಿಂದಾಗಿ ಸಮಾಧಿಮರಣ ಹೊಂದಿ ಸರ್ವಾರ್ಥಸಿದ್ದಿಯೆಂಬ ಸ್ವರ್ಗಕ್ಕೆಹೋಗಿ ಅಹಮೀಂದ್ರ ದೇವನಾದನು.

ಈ ಕಥೆಯ ಶೈಕ್ಷಣಿಕವಾಗಿ ಅರಿಷ್ಟನೇಮಿ ಭಟಾರರ ಧಾರ್ಮಿಕ ವಿಚಾರದಿಂದಾಗಿ ಎಂಥಹ ದುಷ್ಟ ವ್ಯಕ್ತಿಯು ಸಹಿತ ಪರಿವರ್ತನೆ ಯಾಗುತ್ತಾನೆಂಬುದು ತಿಳಿಸುತ್ತದೆ.

### ೫.೪ ಸನತ್ಕುಮಾರ ಚಕ್ರವರ್ತಿಯ ಕಥೆ:

ಜೈನರ ತ್ರಿಷಷ್ಠಿ ಶಲಾಕಾಪುರುಷರಲ್ಲಿ ಸನತ್ಕುಮಾರನು ಒಬ್ಬನು. ಜನ್ಮಾಂತರಗಳಿಂದಲೇ ಮುಂದುವರಿದು ಬರುವ ದ್ವೇಷ. ಹೇಯವಾದ ಶರೀರದ ಬಗೆಗೆ ಆಲಕ್ಷ್ಯ, ತಪಸ್ಸಿನ ಹಿರಿಮೆ – ಇವನ್ನು ಈ ಕಥೆ ಚೆನ್ನಾಗಿ ಪ್ರತಿಪಾದಿಸುತ್ತದೆ. ಈ ಕಥೆಯಲ್ಲಿ ಪ್ರಜ್ಞೆವು ಅವಲೋಕಿಸಿ ಮೊದಲಾದ ಮಂತ್ರ ವಿದ್ಯೆಗಳನ್ನು ಹೊಂದಿದ ವಿದ್ಯಾದರ ಅರಸುಕುಮಾರನ ಮನರಂಜನೆ, ಪ್ರೇಮ, ಸಾಹಸ, ದ್ವಂದ್ವಯುದ್ದ. ಯುದ್ಧಾದಿಗಳ ವರ್ಣನೆಗಳಿಂದ ಕೊಡಿಕೊಂಡಿದೆ. ಈ ಕಥೆಯಲ್ಲಿ ಯಕ್ಷ ಕಿನ್ನರಾದಿಗಳೂ ಬರುವರು. ಅಲ್ಲದೆ ಗುಣಧರು ಮತ್ತು ಸುಮಾಳಿಗಳೆಂಬ ಇಬ್ಬರು ಚಾರಣ ಮುನಿಗಳು. ವಿದ್ಯಾಧರನ ದೇವಕನ್ಯೆಯರ ಸ್ವರೂಪ ಮತ್ತು ಇಲ್ಲಿಯ ವಾತವರಣಕ್ಕೆ ಪುರ್ವಜನ್ಮದ ಕಥೆ ಧರ್ಮದ ಮತ್ತು ಪವಿತ್ರ ಭಾವನೆಗಳ ಕುರಿತು ವಿವರಿಸುವರು.

ಶ್ರಾವಕ ಜಿನವರ್ಮನ ಕಥೆಯು ಕರ್ಮಸಿದ್ಧಾಂತವನ್ನು ಉದಾಹರಿಸಿ ಶ್ರಾವಕವ್ರತದ ಮಹತ್ವವನ್ನು ವಿವೇಚಿಸುತ್ತದೆ. ಈ ಸಿದ್ಧಾಂತವನ್ನು ಜಿನಧರ್ಮವನ್ನು ತನ್ನ ಶಬ್ದಗಳಲ್ಲಿ ವಿವರಿಸುವನು, ದಾನ, ಪೂಜೆ, ಶೀಲ ಮತ್ತು ಉಪವಾಸಗಳನ್ನು ಹೊಂದಿದ ಚತುರ್ವಿದ ಶ್ರಾವಕಧರ್ಮವನ್ನು ಉಲ್ಲೇಖಿಸಲಾಗಿದೆ.

ಕಥೆಯ ಕೊನೆಯ ಭಾಗ ಸನತ್ಕುಮಾರನ ಜೀವನಕ್ಕೆ ಸಂಬಂಧಿಸಿದ ಎರಡು ವಿಶೇಷ ಘಟನೆಗಳನ್ನೊಳಗೊಂಡಿದೆ – ಮೊದಲನೆಯದು ಆಚಾಮ್ಲವರ್ಧನ ವತ್ರದ ಮತ್ತು ಅವಿಚಿಮರಣದ ಮಹತ್ವವನ್ನು ಉದಹರಿಸುತ್ತದೆ. ಎರಡನೆಯದಾಗಿ ಹುಟ್ಟು, ಬೇನೆ, ಮುಪ್ಪು ಮರಣಗಳಿಗೆ ಮದ್ದು ಜಿನ ಮಾರ್ಗವೇ (ಮುನಿಧರ್ಮವೇ) ಶ್ರೇಷ್ಠವೆಂದು ತಿಳಿಸಿ. ಅಲ್ಲದೆ ಇದು ಅಪ್ರತ್ಯಕ್ಷವಾಗಿ ಜಿನಮುನಿಯು ತನಗಾದ ರೋಗಕ್ಕೆ ಔಷದೋಪಚಾರವನ್ನು ಮಾಡಬೇಕೆಂಬ ಮುನಿಧರ್ಮದ ನಿಯಮವನ್ನು ವಿವೇಚಿಸುತ್ತದೆ. ಸನತ್ಕುಮಾರ ಭಟಾರರು ಏಳುನೂರು ವ್ಯಾಧಿಗಳನ್ನು ನೂರು ವರ್ಷದವರೆಗೆ ಸೈರಿಸಿ, ಘೋರ ವೀರ ತಪಶ್ಚರಣವೆಸಗಿ ಸಮಾಧಿಮರಣವನ್ನು ಹೊಂದುವುದಾಗಿ ಈ ಕಥೆಯಲ್ಲಿ ಕಂಡು ಬರುತ್ತದೆ.

ಈ ಕಥೆಯು ಶೈಕ್ಷಣಿಕ ಪಠ್ಯವಾಗಿ ಕರ್ಮಸಿದ್ಧಾಮತದ ವಿವರಣೆಯೊಂದಿಗೆ ದಾನ, ಪೂಜೆ, ಶೀಲ, ಉಪವಾಸ ಈ ನಾಲ್ಕು ಶ್ರಾವಕ ಧರ್ಮದ ಮಹತ್ವ ತಿಳಿಸುತ್ತದೆ.

### ೫.೫ ಅಣ್ಣಿಕಾ ಪುತ್ರನ ಕಥೆ :

ಇದೊಂದು ಕಥಾಕಾರ ತನ್ನ ಉದ್ದೇಶವನ್ನು ನೇರವಾಗಿ ಸಾಧಿಸಿದ ಕಥೆಯಾಗಿದ್ದು ಈ ಒಂದು ಚಿಕ್ಕ ಕಥೆಯಲ್ಲಿ ವಿಶೇಷವಾಗಿ ಯಾವುದೇ ಸಾಮಾಜಿಕ ಘಟನೆಗಳಲ್ಲಿ ಧರ್ಮಶ್ರವಣ, ವೈರಾಗ್ಯ, ದೀಕ್ಷೆ, ಧ್ಯಾನ, ಕಾರ್ಯೋತ್ಸರ್ಗ, ಮೋಕ್ಷ ಇವುಗಳನ್ನು ಸಾಧಿಸಿರುವ ಪ್ರಸಂಗಗಳಿವೆ.

ಮಗದ ಎಂಬ ನಾಡಿನಲ್ಲಿ ಅಲ್ಲಿ ಉತ್ತರ ಮಥರೆ ಎಂಬ ಪಟ್ಟಣವನ್ನು ಪ್ರಜಾಪಾಲನೆಂಬ ಅರಸನು ಆಳುತ್ತಿದ್ದನು. ಅದೇ ಊರಿನಲ್ಲಿ ಧರ್ಮದತ್ತನೆಂಬ ವರ್ತಕನಿದ್ದನು. ಅವನ ಮಗ ಧನದೇವನೆಂಬುವನು. ಒಂದು ದಿನ ವ್ಯಾಪಾರಕ್ಕೆಂದು ಅಮೂಲ್ಯವಾದ ಸರಕುಗಳನ್ನು ತುಂಬಿಕೊಂಡು ದಕ್ಷಿಣ ಮಧುರೆಗೆ ಹೋದನು. ಆಪಟ್ಟಣದ ರಾಜಶ್ರೇಷ್ಠಿ, ತಿಲಕ ಶ್ರೇಷ್ಠಿಯ, ಎಂಟು ಜನ ಮಕ್ಕಳಲ್ಲಿ ಅತ್ಯಂತ ಕಿರಿಯಳಾದ ಅಣ್ಣಿಕೆಗೆ ಧನದೇವನ ರೂಪ ಲಾವಣ್ಯ ಸೌಭಾಗ್ಯಕಾಂತಿ ಗುಣಗಳನ್ನು ನೋಡಿ ಸಂತೋಷಪಟ್ಟು. ಅವನಿಗೆ ಕೊಟ್ಟು ಮದುವೆ ಮಾಡಿದನು. ಆಕೆಯಲ್ಲಿ ಜನಿಸಿದ ಮಗುವಿಗೆ ಅಣ್ಣಿಕಾಮತ್ರ. ಎಂಬ ಹೆಸರಿಟ್ಟರು ಮಗು ಸುಖವಾಗಿ ಬೆಳೆದು ಯುವಕನಾದನು.

ಒಮ್ಮೆ ದಮಾನಸೂರಿಗಳೆಂಬ ಅವಧಿಜ್ಞಾನಿಗಳಿಂದ ಧರ್ಮವನ್ನು ಕೇಳಿ ಸಮ್ಯಕ್ತ್ವ ಪೂರ್ವವಾಗಿ ಶ್ರಾವಕ ವೃತ್ತಗಳನ್ನು ಅವರಿಂದ ಸ್ವೀಕರಿಸಿ ತನಗೆ ಸ್ವಲ್ಪವೇ ಆಯುಷ್ಯವಿರುವುದಾಗಿ ತಿಳಿದುಕೊಂಡನು. ವೈರಾಗ್ಯ ಪರಾಯಣವಾಗಿ ಸರ್ವವನ್ನು ಪರಿತ್ಯಾಗಮಾಡಿ ಏಕವಿಹಾರಿಯಾಗಿ ತೀರ್ಥಕ್ಷೇತ್ರಗಳಿಗೆ ಹೋಗುತ್ತಿರುವಾಗ ನಾವೆಯಲ್ಲಿ ಕುಳಿತು ಗಂಗೆಯನ್ನು ದಾಟುತ್ತಿರುವಾಗ ಬಿರುಗಾಳಿಗೆ ನಾವೆ ಸಿಕ್ಕಿ ಮುಳುಗಿತು. ಆದರೂ ವಿಚಲಿತನಾಗದೆ ಸಮಚಿತ್ತದಿಂದ ಕಾರ್ಯೋತ್ಸರ್ಗಮಾಡಿ ಧರ್ಮಧ್ಯಾನ ಶುಕ್ಲಧ್ಯಾನಗಳಿಂದ ಕರ್ಮಗಳನ್ನು ಜಯಿಸಿ ಅಂತರ್ಗತ ಕೇವಲಿಯಾಗಿ ಶಾಶ್ವತ ಶಾಂತಿಯಾದ ಮೋಕ್ಷವನ್ನು ಪಡೆದನು.

ಶೈಕ್ಷಣಿಕ ದೃಷ್ಟಿಯಿಂದಾಗಿ ಈ ಕಥೆಯು ಮಾನಸಿಕ ಶಕ್ತಿಯನ್ನು ಅವಲಂಬಿಸಿರುವ ಇದೊಂದು ಅತೀಂದ್ರ ಜ್ಞಾನವಾಗಿದ್ದು ಇಂಥ ಜ್ಞಾನಿಗಳಾದ ದಮನಸೂರಿ ಗಳಿಂದ ಧಾರ್ಮಿಕ ವಿಚಾರದ, ಮಹತ್ವ ತಿಳಿಯಪಡಿಸುತ್ತದೆ.

## ೫.೬ ಭದ್ರಬಾಹು ಭಟಾರರ ಕಥೆ:

ಈ ಕಥೆಯಲ್ಲಿ ಭದ್ರಬಾಹುವಿನ ಜೀವನ ಸಂಪ್ರತಿ ಚಂದ್ರುಗುಪ್ತನ ಪೂರ್ವಜನ್ಮದ ಕಥೆ-ಇವೆಲ್ಲ ಬರುತ್ತವೆ. ಜಿನಾಚಾರ್ಯ ಸಿಂಧುದೇಶ, ತಮಿಳುನಾಡಗಳಿಗೂ ಶಿಷ್ಯರೊಡನೆ ಹೋದ ವಿಚಾರ ನಿರೂಪಿತವಾಗಿದೆ ದಿಗಂಬರ ಮತ್ತು ಸಂಪ್ರದಾಯದ ಪ್ರಾರಂಭನ್ನು ಹೇಳಲಾಗಿದ್ದು ಜೊತೆಗೆ ಜಿನತತ್ವ ಪ್ರತಿಪಾಧನೆಯೂ ಇದೆ.

ಪುಂವರ್ಧನ ದೇಶದ ಕೌಂಡಿನಿ ಎಂಬ ಪಟ್ಟಣದಲ್ಲಿ ರಜಪುರೋಹಿತ ಸೋಮಶರ್ಮ ಮತ್ತು ಸೋಮಶ್ರೀಯಲ್ಲಿ ಭದ್ರಬಾಹು ಜನಿಸಿದನು, ಬಾಲಕ ಭದ್ರಬಾಹು ಜೊತೆಯವರೊಡನೆ ಚಿಲ್ಲೆಯಾಡುತ್ತಿದ್ದಾಗ ಗೋಮರ್ಧನ ಭಟಾರರು ಬಂದು ಈ ಬಾಲಿಕ ಮುಂದೆ ಯೋಗಿಯಾಗುವನೆಂದರಿತು. ಆತನ ತಂದೆ-ತಾಯಿಗಳ ಅನುಮತಿ ಪಡೆದು ಅವನನ್ನು ವಿದ್ಯಾಪಾರಾಂಗತವನನ್ನಾಗಿ ಮಾಡಿ, ತಾವೂ ಮೋಕ್ಷಕ್ಕೆ ಹೋದರು - ಭದ್ರಬಾಹು ಜನ ದೀಕ್ಷೆ ಪಡೆದು ಋಷಿಯಾಗಿ ಸಂಚರಿಸುತ್ತಿದ್ದರು.

ಇತ್ತ ಪಾಟಲಿಪುತ್ರದಲ್ಲಿ ಚಾಣಾಕ್ಯನು ನಂದರಾಜ್ಯನನ್ನು ಅಂತ್ಯಗೊಳಿಸಿ ಚಂದ್ರುಗುಪ್ತನಿಗೆ ಪಟ್ಟಿನೆಟ್ಟಿದನು. ಚಂದ್ರುಗುಪ್ತನ ಮೊಮ್ಮಗ ಅಶೋಕ. ಅಶೋಕನ ಮಗ ಕುಣಾಲ ಅವನ ಮಗ ಸಂಪ್ರತಿ ಚಂದ್ರುಗುಪ್ತ ಇವನು ಸಮಾಧಿ ಗುಪ್ತರೆಂಬ ಅವಧಿ ಜ್ಞಾನಿಗಳಿಂದ ಧರ್ಮವನ್ನು ಕೇಳಿ ತನ್ನ ಪೂರ್ವಜನ್ಮಗಳನ್ನು ಹೇಳಬೇಕೆಂದು ಕೇಳಿದಾಗ ಅವರು ಈ ರೀತಿಯಾಗಿ ವಿವರಿಸಿದರು.

ಭರತಕ್ಷೇತ್ರದ ಅವಂತಿ ಎಂಬ ನಾಡಿನಲ್ಲಿ ವೈದಿಶ ಪಟ್ಟಣದಲ್ಲಿ ಜಯವರ್ಮನೆಂಬ ರಾಜ. ಆಪಟ್ಟಣದ ಸಮೀಪ ದೇವಿಲನೆಂಬ ಶಾಕಟಿಕ ಹರನಿದ್ದನು. ಅವನ ಹೆಂಡತಿ ಪೃಥ್ವಿಶ್ರೀ

ಗರ್ಭದಲ್ಲಿ ಪಾಪ ಜೀವ ನಲೆಸಲು ದೇವಿಲನಿಗೆ ಕಷ್ಟ ಪರಂಪರೆಯುಂಟಾಗಿ ಕಳ್ಳರಿಂದ ಹತನಾದನು. ಪೃಥ್ವಿಶ್ರೀಯಲ್ಲಿ ನಂದಿ ಮಿತ್ರನು ಜನಸಿದ ಫಲವಾಗಿ ನಂಟರಿಷ್ಟರು ಸತ್ತರು. ಆಗ ನಂದಿಮಿತ್ರನನ್ನು ಅಟ್ಟಿಕಳಿಸಿದರು. ನಂದಿಮಿತ್ರನು. ಒಬ್ಬ ಕಾಷ್ಟಕೊಟವ ಜೊತೆ ಸೇರಿದನು. ಆವನು ಹೊಟ್ಟೆಗೆ ಸಾಲುವಷ್ಟು ಅನ್ನಕೂಡಾ ಕೊಡಲಿಲ್ಲ. ಕಾರಣ ನಂದಿಮಿತ್ರನು ಕಾಷ್ಟಕೂಟನನ್ನು ಬಿಟ್ಟು ಜೀವಿಸತೋಡಗಿದನು.

ಒಮ್ಮೆ ನಂಬಿಮಿತ್ರನು ಶಿವಗುಪ್ತಾಚಾರ್ಯ ಜೊತೆಯಲ್ಲಿ ಹೋದುದ್ದಕ್ಕಾಗಿ ರಾಜ ಮರ್ಯಾದೆ ಸತ್ಕಾರ ಸಿಕ್ಕಿತು. ತಾನೂ ಋಷಿರೂಪವನ್ನು ತಾಳಿದರೆ ತನಗೂ ಲೋಕದಲ್ಲಿ ಗೌರವ ಸತ್ಕಾರಗಳು ಲಭಿಸುವವೆಂದು ತಿಳಿದನು. ಈತನ ಅಲ್ಪಾಯವೂ ಗಮನಿಸಿದ ಭಟಾರರು ತಪಸ್ಸನ್ನು ಉಪದೇಶಿಸಿ ದೀಕ್ಷೆ ಕೊಟ್ಟರು. ನಂದಿ ಮಿತ್ರನು ತನ್ನ ತಪದ ಮಹಿಮೆಗೆ ಅಹಂಕಾರ ತಾಳಿದನು. ರಾಜ-ರಾಣಿ, ಮಂತ್ರಿ, ರಾಜಶ್ರೇಷ್ಟಿ, ಯುವರಾಜ ಇವರೆಲ್ಲರೂ ಇತನನ್ನ ಪಾರಣೆ ಮಾಡಲಾರದೆ ಹೋದರು. ಭಟಾರರು ನಂದಿ ಮಿತ್ರನ ಒಂದೇ ದಿನ ಆಯುಷ್ಯ ಗಮನಿಸಿ ಪಂಚನಮಸ್ಕಾರಗಳನ್ನು ಉಪದೇಶಿಸಿದರು. ಕಾರಣ ಆತನು ಧ್ಯಾನದಿಂದ ಸತ್ತು ಕನಕಧ್ವಜನೆಂಬ ದೇವನಾಗಿ. ಆಮೇಲೆ ಸಂಪ್ರತಿ ಚಂದ್ರಗುಪ್ತನಾಗಿ ಜನಿಸಿದನು. ಇದೂ ಕೂಡಾ ಆರಾಧಕನಿಗೆ ಮತ್ತು ಧಾರ್ಮಿಕ ಆಗುಂತಕರಿಗೆ ಪ್ರೇರಣೆ ಕೊಡುವ ಬಂದು ಪ್ರದರ್ಶನವೇ ಆಗಿದೆ.

"ಸಂಪ್ರತಿ ಚಂದ್ರಗುಪ್ತನು ಭದ್ರಬಾಹು ಭಟಾರರು ದೇಶಗಳನ್ನು ಸಂಚರಿಸುತ್ತ ಉಜ್ಜಯನಿಗೆ ಬಂದಾಗ ಅವರಿಂದ ಶ್ರಾವಕ ವ್ರತಗಳನ್ನು ಸ್ವೀಕರಿಸಿದರು ಭಟಾರರು ಚರಿಗೆ ಹೋದ ಸಂದರ್ಭದಲ್ಲಿ ಒಂದು ಅವ್ಯಕ್ತವಾದ ಕಿರುಗೊಸಿಸಿ ಆಳುವಿನಲ್ಲಿ ಮುಂದೆ ಹನ್ನೆರಡು ವರ್ಷ ಬರಗಾಲ ಬರಲಿರುವುದಾಗಿ ತಿಳಿಸಿದರು. ಅದೇ ರಾತ್ರಿ ಸಂಪ್ರತಿ ಚಂದ್ರಗುಪ್ತನು ಹದಿನಾರು ಕೆಟ್ಟ ಕನಸುಗಳನ್ನು ಕಂಡನು. ಕಾರಣ ಹಿರಿಯ ಮಗನಾದ ಸಿಂಹಸೇವನಿಗೆ ಪಟ್ಟಕಟ್ಟಿ ಅನೇಕ ರಾಜಕುಮಾರರೊಡನೆ ದೀಕ್ಷೆತಾಳಿ ಭದ್ರಬಾಹು ಭಟಾರರೊಂದಿಗೆ ತಪೋಮಗ್ನ ನಾಗಿ ಸಿಂದು ದೇಶಕ್ಕೆ ಹೋದಾಗ ಅಲ್ಲಿ ದಿಗಂಬರ ಯತಿಯೊಬ್ಬನು ರಾತ್ರಿಯಲ್ಲಿ ಶ್ರಾವಕರ ಮನೆಗೆ ಹೋದಾಗ ವೇಶಾ ಸ್ವಾಮಿನಿಯಂಬಳಿಗೆ ಹೆದರಿಕೆಯಾಗಿ ಗರ್ಭಪಾತವಾಗಲು ಶ್ರಾವಕರು ಆ ಯತಿಗೆ ಆರ್ಧಕಪ್ಪಡವನ್ನು ಉಡಲು ಹೇಳಿದರು ಮದ್ಯದೇಶದಲ್ಲಿ ಕ್ಷಾಮತೀರಿದಾಗ ಆಚಾರ್ಯರು ಅಲ್ಲಿ ಬಂದಾಗ ಅಲ್ಲಿದ್ದ ವಿಶಾಖಾಚಾರ್ಯರು ಅರ್ಧಕಪ್ಪಡವನ್ನು ಬಿಟ್ಟು ದಿಗಂಬರರಾಗಿ ತಪಸ್ಸುಮಾಡಲು ಹೇಳಿದಾಗ ಕೆಲವರು ಆದನ್ನು ಅನುಸರಿಸಿದರು ಮತ್ತೆ ಕೆಲವರು. ಅರ್ಧಕಟ್ಟಡವನ್ನು ಮುಂದುವರಸಿದರು. ಇವರು ಶ್ವೇತಾಂಬರರಾದರು ದಕ್ಷಿಣಾ ಪಥದವರು ದಿಗಂಬರರಾದರು".[೪] ಎಂಬುದಾಗಿ ಇಲ್ಲಿನ ಕಥೆಗಳು ನಿರೂಪಿಸುತ್ತವೆ.

ಭದ್ರಬಾಹು ಭಟಾರರು ಶ್ರವಣ ಬೆಳ್ಗೊಳದ ಏಕಝುರಿಯ ಮೇಲೆ ತಪಸ್ಸು ಮತ್ತು ಉಪವಾಸ ಮಾಡಿ ದೇಹತ್ಯಾಗಮಾಡಿ ಅಮಿತಕಾಂತಿ ಎಂಬ ದೇವನಾಗಿ ಜನಿಸಿದರು.

ಚಂದ್ರಗುಪ್ತ ಮುನಿಗಳು ಅತ್ಯುಗ್ರ ತಪಸ್ಸನ್ನು ಆಚರಿಸಿ ಬ್ರಹ್ಮಕಲ್ಪದಲ್ಲಿ ಶ್ರೀಧರದೇವನಾಗಿ ಜನಿಸಿದರು.

ಶೈಕ್ಷಣಿಕ ಪಠ್ಯಗಳ ವಿಷಯವಾಗಿ ಈ ಕಥೆಯು ಭದ್ರಬಾಹು ಭಟ್ಟಾರರ ಕಥೆಯಲ್ಲಿ ಗೋವರ್ಧನ ಭಟಾರರಲ್ಲಿ ಸಕಲ ವಿದ್ಯಗಳನ್ನು ಕಲಿತು. ಊರಿಗೆ ಬಂದು ತಂದೆ-ತಾಯಿಗಳಿಗೆ ವಿದೇಯನಾಗಿ ಪಂಡಿತರೊಂದಿಗೆ ವಾದ ಮಾಡಿ ಗೆದ್ದು ಭದ್ರಬಾಹು ಅವರ ಕೀರ್ತಿದಶದಿಕ್ಕುಗಳಲ್ಲಿ ಹರಡುವುದು. ನಂತರ ಗೋವರ್ಧನ ಭಟ್ಟರಲ್ಲಿ ಬ್ರಹ್ಮಚಾರಿಯಾಗಿ ಅವರ ಬಳಿ ತಪಸ್ಸು ಮಾಡಿ ಕೆಲವೇದಿನಗಳಲ್ಲಿ ದ್ವಾದಶಾಂಗ ಚತುರ್ದಶ ಪೂರ್ವ ಆಗಮಗಳನ್ನು ಕಲಿತು ಭಕ್ತಿಪೂರ್ವವಾಗಿ ಗುರುಗಳಲ್ಲಿ ನಡೆದು ಪ್ರತಿಮಾ ಯೋಗದಲ್ಲಿದ್ದು ನಿರತನಾದನು ರತ್ನಾತ್ರಯಗಳನ್ನು ಸಾಧಿಸಿ ಸತ್ತುದೇವಲೋಕಕ್ಕೆ ಹೋದದ್ದು ಆತನಲ್ಲಿರುವ ಶ್ರದ್ಧೆ, ನಿಷ್ಠೆ ಮತ್ತು ಗುರುಭಕ್ತಿ ತಿಳಿಸುತ್ತದೆ.

## ೫.೭ ಲಲಿತಘಟೆಯ ಕಥೆ :

ಈ ಕಥೆಯೂ ಇಡೀ ಜೈನಧರ್ಮದ ತತ್ವಜ್ಞಾನದ ಸಾರವನ್ನೊಳಗೊಂಡಿದ್ದು. ಲಲಿತಘಟೆ ಎಂಬುದು ಐನೂರು ಮಂದಿಯ ಒಂದು ಗುಂಪು. ತಪೋಮಹಿಮೆ ಸದುಪದೇಶದಿಂದ ದುಷ್ಟರು ಶಿಷ್ಟರಾಗಿ ಯೋಗಿಗಳಾದ ಘಟನೆಯೂ. ಈ ಕಥೆಯಲ್ಲಿದೆ ಅಲ್ಲದೆ ನೈತಿಕ ಮತ್ತು ಆಧ್ಯಾತ್ಮಿಕ ಬೋಧಾನಾಂಶಗಳನ್ನು ಒಳಗೊಂಡಿದೆ.

ವತ್ಸೆ ಎಂಬ ನಾಡಿನ ಕೌಶಂಬ ಎಂಬ ಪಟ್ಟಣದಲ್ಲಿ ಹರಿಧ್ವಜನೆಂಬ ಅರಸ ಅವನ ಪತ್ನಿ ವಾರುಣಿ, ಇವರಿಗೆ ಶ್ರೀವರ್ಧನ, ವಿಬುಧರ, ಮೊದಲಾದ ಮೂವತ್ತೇರಡು ಜನ ಮಕ್ಕಳು. ಅವರು ಸಾಮಂತ ಮಹಾಸಾಮಂತರ ಮಕ್ಕಳು ಒಟ್ಟಿಗೆ ಸೇರಿ ಐದುನೂರು ಜನ, ರೂಪ, ತೇಜಸ್ಸು, ಯೌವನ, ಸಂಪತ್ತುಗಳಲ್ಲಿ ಒಂದೇ ಸಮನಾದುದರಿಂದ ಅವರಿಗೆ ಒಟ್ಟಾಗಿ ಲಲಿತಘಂಟೆ ಎಂಬ ಹೆಸರು ಬಂದಿತ್ತು. ಇವೆರಲ್ಲರೂ ಮಿಥ್ಯದೃಷ್ಟಿಗಳು ಪಂಡಿತರು ಆಗಿದ್ದರು. ಒಮ್ಮೆ ಶ್ರೀಕಾಂತ ಪರ್ವತದ ಕಾಡಿಗೆ ಬೇಟೆಗಾಗಿ ಹೋಗಿದ್ದಾಗ ಆಭಯ ಘೋಷರೆಂಬ ಭಟಾರರ ತಪೋಮಹಿಮೆಯಿಂದಾಗಿ ಯಾವ ಮೃಗವು ಬೇಟೆಗೆ ದೊರೆಯಲಿಲ್ಲ. ಈ ರೀತಿಯಾಗಿ ಎಡೆಬಿಡದೆ ಏಳು ದಿನ ಹೋಗಿ ಬೇಸತ್ತು ಎಂಟನೆಯ ದಿನ ಕಾಡಿನಲ್ಲಿ ಮೃಗಗಳನ್ನು ಹುಡುಕುತ್ತಾ ಅಲೆಯುತ್ತಿದ್ದಾಗ. ತಪೋಮಗ್ನರಾದ ಭಟಾರರನ್ನು ಕಂಡು ಇದೊಂದು ಕರಿಯ ಮೃಗವೆಂದು ಬಾಣ ಹೊಡೆಯಲು ಸನ್ನದ್ದರಾದಾಗ ಅವರು ಬಿಲ್ಲುಗಳು ಮುರಿದು ಹೋದವು. ಅಷ್ಟು ಜನರು ಹಿಂದಕ್ಕೆ ಬಿದ್ದರು. ಇದೇನಿದು ಮಹಾಚೋದ್ಯವೆಂದು ಹತ್ತಿರ ಹೋಗಿ ನೋಡಿದಾಗ ಅಭಯ ಪೋಷಕರು ಕಾಣಿಸಿದರು. ಎಲ್ಲರೂ ಭಟಾರರನ್ನು ಒಂದಿಸಿ ನಮಗೆ ಧರ್ಮವನ್ನು

ಹೇಳಬೇಕೆಂದು ಕೇಳಿಕೊಂಡಾಗ ಭಟಾರರು ಕೊಲ್ಲುವುದು, ಮದು, ಮದ್ಯ, ಮಾಂಸ ಸೇವನೆ, ಪಂಚಮಹಾಪಾತಕಗಳು ನಿಜವಾದ ಧರ್ಮಯಾವುದು? ನಿಜವಾದ ಮುನಿಯಾರು ಮತ್ತು ನಿಜವಾದ ದೇವನಾರು?ಜೀವನದ ನರಕ, ತಿರ್ಯಕ್, ಮಾನವ ಮತ್ತು ದೇವ ಎಂಬ ನಾಲ್ಕು ಗತಿಗಳನ್ನು ವಿವರಿಸಿದರು.

ಅವರೆಲ್ಲರಿಗೂ ಇಪ್ಪತ್ತೊಂದೆ ದಿನ ಆಯುಷ್ಯ ಇದೆ ಎಂದು ತಿಳಿದು. ವರ್ಧಮಾನ ಭಟಾರರ ತೀರ್ಥವು ಕೌಶಂಬಿಗೆ. ಬಂದಿತ್ತು ಶ್ರೀವರ್ಧದ ಮುಂತಾದ ಲಲಿತಘಟೆಯು ಎಲ್ಲರೂ ವಂದಿಸಿ ಅವರ ಶಿಷ್ಯರಾಗಿ ತಪಸ್ಸು ಮಾಡಿ ಪ್ರಾಯೋಪಗಮನದಿಂದ ಜೀವ ಇರುವಾಗಲೇ ಆಹಾರ ತೊರೆದು ಹದಿನೈದು ದಿನ ಮಲಗಿದ್ದರು. ಆಗ ಭಾರೀ ಮಳೆಬಂದುದರಿಂದ ಮಹಾಪ್ರವಾಹದಿಂದ ಇವರನ್ನೆಲ್ಲ ಕೊಚ್ಚಿಕೊಂಡು ಬಾರೀ ಮಡುವಿನಲ್ಲಿ ಹಾಕಿತು. ಇವರೆಲ್ಲರೂ ನೀರಿನಲ್ಲಿದ್ದರೂ. ನಿರ್ಮೋಹರಾಗಿ ದೇವರನ್ನು ಧ್ಯಾನಿಸುತ್ತ ಪಂಚಮನಮಸ್ಕಾರಗಳು ಮನಸ್ಸಿನಲ್ಲಿ ಉಚ್ಚರಿಸಿ ದರ್ಶನ ಜ್ಞಾನ ಚಾರಿತ್ರ್ಯಗಳನ್ನು ಆಚರಿಸಿ ದೇಹತ್ಯಾಗಮಾಡಿ ಸತ್ತು ಮೂವತ್ತು ಮೂರು ಸಾಗರ ವರ್ಷ ಆಯುಷ್ಯವುಳ್ಳ ಅಹಮೀಂದ್ರದೇವನಾಗಿ ಹುಟ್ಟಿದರು.

ಶೈಕ್ಷಣಿಕ ಪಠ್ಯವಿಷಯವಾಗಿ ಈ ಕಥೆಯಲ್ಲಿ ಮಿಥ್ಯಾದೃಷ್ಟಿ ಎಂಬ ಶಬ್ದವನ್ನು ಬ್ರಾಹ್ಮಣ ವಿದ್ಯೆಗೆ ಸಂಬಂಧಿಸಿದಂತೆ ಉಪಯೋಗಿಸಲಾಗಿದೆ. ಲಲಿತಘಟೆ ಎಂಬ ಪುರೋಹಿತನು ಮಿಥ್ಯಾತ್ವದೃಷ್ಟಿಯವನಾಗಿರುತ್ತಾನೆ. ಬ್ರಾಹ್ಮಣರಲ್ಲಿ ಕೆಲವರು ತಾವಾಗಿಯೇ ಜೈನ ಧರ್ಮದ ಆಚಾರದ ಮಹತ್ವವನ್ನು ಅರಿತುಕೊಂಡು ಪರಿವರ್ತನೆ ಯಾಗುತ್ತಿದ್ದರು. ಬ್ರಾಹ್ಮಣರು ಪುರೋಹಿತ ಅಚಾರ-ಸುಖ-ಸಂಪತ್ತು ಅನುಭವಿಸುತ್ತ ಐಹಿಕ ಅಧಿಕಾರವನ್ನು ಪಡೆಯುತ್ತಿದ್ದರು ಅವರಿಗೆ ಸ್ಥಾನಮಾನಗಳು ಸಿಗುವುದು ಅವರ ವಿದ್ಯೆಯಿಂದಾಗಿ. ಮಂತ್ರಿಯ ಮರಣದ ನಂತರ ಅವರಿಗೆ ಸ್ಥಾನಮಾನಗಳಲ್ಲಿದಿರುವಾಗ ಕಷ್ಟ-ಪಟ್ಟು ವಿದ್ಯೆ ಸಂಪಾದಿಸಿ ಐಹಿಕ ಅಧಿಕಾರವನ್ನು ಪಡೆದುಕೊಂಡರು ಎಂಬುದು ತಿಳಿದುಬರುತ್ತದೆ.

### ೫.೮ ಧರ್ಮ ಘೋಷ ಭಟಾರರ ಕಥೆ :

ಧರ್ಮಘೋಷ ಮತ್ತು ಧರ್ಮಕೀರ್ತಿಗಳೆಂಬರ ಇಬ್ಬರು ಮುನಿಗಳ ಕಠಿಣವಾದ ತಪಸ್ಸಾಧನೆಯನ್ನು ಕುರಿತು ವರ್ಣಿಸುವ ಕಥೆಇದಾಗಿದೆ

ಕಾಶಂಬಿನಾಡಿನ ವಾರಣಾಸಿ ನಗರವನ್ನು ಕೀರ್ತಿಧರನೆಂಬ ಅರಸನು ಆಳುತ್ತಿದ್ದನು. ಆತನ ಪಟ್ಟದರಸಿಯರು ಆರತಿ ಮತ್ತು ರತಿ ಎಂಬಿಬ್ಬರು. ಇವರು ಇಬ್ಬರಿಗೆ ಮಕ್ಕಳು ಧರ್ಮಘೋಷ ಮತ್ತು ಧರ್ಮಕೀರ್ತಿ ಎಂಬುವರು ಇವರು ಇಷ್ಟವಿಷಯ ಕಾಮ, ಭೋಗಗಳಿಂದ ಸುಖವಾಗಿ ಕಾಲ ಕಳೆಯುತ್ತಿದ್ದರು. ಒಮ್ಮೆ ಗುಣೋತ್ತಮರೆಂಬ ಭಟಾರರು

ವಾರಣಾಸಿಯ ಊರ ಹೋರಗಿನ ಉದ್ಯಾನಕ್ಕೆ ಬಂದಿದ್ದಾಗ ಅವರಿಂದ ಈ ಅರಸುಕುಮಾರರು ವಂದಿಸಿ ಧರ್ಮೋಪದೇಶ ಹೇಳಬೇಕೆಂದು ಉಪದೇಶ ಕೇಳಿದರು - ಪರಿಣಾಮವಾಗಿ ಅವರಿಬ್ಬರಲ್ಲಿಯೂ ವೈರಾಗ್ಯವುಂಟಾಗಿ ತಂದೆ ತಾಯಿ ಬಂಧುಗಳನ್ನು ಬಿಟ್ಟು ಗುರುಗಳೊಂದಿಗೆ ಹನ್ನೆರಡು ವರ್ಷವಿದ್ದು. ನಾಲ್ಕು ಬಗೆಯ ಅನುಯೋಗಗಳನ್ನು ಕಲಿತು ಶಾಸ್ತ್ರ ಪಾರಾಂಗತರಾಗಿ ಗಂಗಾತೀರದ ತುರುಪಟ್ಟಿಗೆ ಪಾರಣೆಗಾಗಿ ತೆರಳಿದಾಗ. ತುರುಪಟ್ಟಿಗೆ ಬೇರೆಯೆಡೆಗೆ ಹೋಗಿತ್ತು. ಧರ್ಮಘೋಷ ಭಟಾರರು ಬೇರೆ ತುರು ಪಟ್ಟಿಗೆ ಹೋದರೆ ಧರ್ಮ ಘೋಷ ಭಟಾರರು ಹೋಗದೆ ಹಸಿವು ಬಾಯಾರಿಕೆಯಿಂದ ಬಳಲಿದರು. ಅದನ್ನು ಕಂಡ ಗಂಗಾದೇವಿ ಅವರ ಮೇಲೆ ಅನುಕಂಪ ಭಕ್ತಿಯುಂಟಾಗಿ ಚಿನ್ನದ ಕೊಡದಲ್ಲಿ ತಣ್ಣಗಿರುವ ಯಾವ ಜೀವಿ ಸೇವಿಸದಿರುವ ನೀರನ್ನು ಕುಡಿದು ಬಾಯಾರಿಕೆ ಆರಿಸಿಕೊಳ್ಳಿ. ಅನಂತರ ಅರಮನೆಗೆ ಹೋಗಿ ಅನ್ನವನ್ನು ತರುತ್ತೇನೆಂದಳು. ಆದರೆ ಭಟಾರರು ನೀರನ್ನು ಸ್ವೀಕರಿಸಲ್ಲಿ. ಆಗ ಗಂಗಾದೇವಿಯು ಆಶ್ವರ್ಯ ಚಕಿತಳಾಗಿ ಪೂರ್ವವಿದೇಹ ಕ್ಷೇತ್ರಕ್ಕೆ ಹೋಗಿ ಸೀಮಂಧರ ತೀರ್ಥಂಕರನ್ನು ಕಂಡು ನೀರು ಸ್ವೀಕರಿಸದಿರದಕ್ಕೆ ಕಾರಣ ಕೇಳಿದಳು. ಆಗ ಭಟಾರರು ಋಷಿಗಳು ದೇವತೆಗಳ ಕೈಯಿಂದ ನೀರು ಕುಡಿಯಬಾರರೆಂಬ ನಿಯಮವಿದೆ ಎಂದರು. ಗಂಗಾದೇವಿ ಧರ್ಮ ಘೋಷ ಭಟಾರರ ಮೇಲೆ ತಣ್ಣನೆ ಗಾಳಿ ಬೀಸಿ ಸುಂಗಂಧ ಜಲವುಳ್ಳ ಮಳೆ ಬೀಳುವಂತೆ ಮಾಡಿದಾಗ. ಭಟಾರರು ತೃಪ್ತರಾಗಿ ಶುಕ್ಲಧ್ಯಾನದಿಮದ ಕರ್ಮವನ್ನು ಕಳೆದು ಮೋಕ್ಷವನ್ನು ಪಡೆದರು.

ಇತ್ತ ಧರ್ಮಕೀರ್ತಿಭಟಾರರು ಬೇರೊಂದು ತುರುಪಟ್ಟಿಗೆ ಹೋದಾಗ ಅದು ಬೇರೊಂದಡೆಗೆ ಹೋಗಿದ್ದ ಕಾರಣ ನಿರಾಶೆಯಾಯಿತು. ಗಂಗಾದೇವಿಯೂ ಬಂದರೂ ಪ್ರಯೋಜನವಾಗದಿರಲು. ಸಮಾಧಿಯಿಂದ ಅವರನ್ನು ಎಚ್ಚರಿಸುವ ಉಪಾಯವನ್ನು ಕೇಳಿದಾಗ ಭಟಾರರು ಅವರು ಅಸನ್ನಭವ್ಯರು ಅವರು ಮೂರನೇ ಜನ್ಮದಲ್ಲಿ ಮೋಕ್ಷಕ್ಕೆ ಹೋಗುವರು ಎಂದಾಗ ಅದನ್ನು ಧರ್ಮಕೀರ್ತಿ ಭಟಾರರಿಗೆ ತಿಳಿಸಿದಾಗ ಅವರು ಸನ್ಮಾರ್ಗಕ್ಕೆ ಮನವನ್ನು ಪರಿವರ್ತಿಸಿ ರತ್ನತ್ರಯಗಳನ್ನು ಸಾಧಿಸಿ ಹದಿನಾರು ಕಲ್ಪದಲ್ಲಿ ಇಪ್ಪತ್ತೇರಡು ಸಾಗರ ಆಯುಷ್ಯವುಳ್ಳ ಅಚ್ಯುತೇಂದ್ರನಾಗಿ ಹುಟ್ಟಿದರು.

ಈ ಕಥೆಯಲ್ಲಿ ಶೈಕ್ಷಣಿಕ ಪಠ್ಯವಾಗಿ ಜೈನಮುನಿಧರ್ಮದ ಒಂದು ನಿಯಮವನ್ನು ಸ್ಪಷ್ಟೀಕರಿಸಲಾಗಿದೆ. ಜೈನಮುನಿಗಳು ದೇವ – ದೇವತೆಗಳ ಕೈಯಿಂದಲೂ ಅನ್ನ ನೀರು ಸ್ವೀಕರಿಸಬಾರದು ಮುನಿಯು ಅಧ್ಯಯನ ಮಾಡಬೇಕಾದ ಆಗಮದ ಪ್ರಥಮಾಯೋಗ. ಚರಣಾನುಯೋಗ, ಕರುಣಾನುಯೋಗ, ದ್ರವ್ಯಾನುಯೋಗ ಎಂಬ ನಾಲ್ಕು ಅನುಯೋಗವನ್ನು ವಿವರಿಸಲಾಗಿದ್ದು ಈ ನಾಲ್ಕು ಅನುಯೋಗಗಳು ಶೈಕ್ಷಣಿಕ ಮಹತ್ವವನ್ನು ತಿಳಿಸುತ್ತವೆ.

## ೫.೯ ಸಿರಿದಿಣ್ಣನೆಂಬ ಭಟಾರರ ಕಥೆ :

ಈ ಕಥೆಯಲ್ಲಿ ಜೈನ ಮುನಿಯೊಬ್ಬನು ತಪಸ್ಸಿಗೆ ವಿಘ್ನಕಾರಿಯಾದ ದೇವೋಪಸರ್ಗವನ್ನು ಸಹಿಸಿ ಶುಕ್ಲಧ್ಯಾನದಿಂದ ಮೋಕ್ಷಕ್ಕೆ ಹೋದ ಪ್ರಸಂಗವನ್ನು ಒಳಗೊಂಡಿದೆ. ಅಂಗವೆಂಬ ನಾಡಿನಲ್ಲಿ ಚಂಪಾನಗರವೆಂಬ ಪಟ್ಟಣ ಇತ್ತು. ಅವನ್ನು ಸಿಂಹರಥನೆಂಬ ಅರಸರು ಆಳುತ್ತಿದ್ದನು. ಇತ್ತ ಮಗದ ಎಂಬ ನಾಡಿನ ಸಾಕೇತವನ್ನು ಸುಮಂತನೆಂಬ ಅರಸನು ಆಳುತ್ತಿದ್ದನು. ಅವನ ಹೆಂಡತಿ ಇಳಾಮಹಾದೇವಿ ಆ ಅರಸನಿಗೊಬ್ಬಳು ದಾದಿಯಿದ್ದಳು. ಅವಳ ಹೆಸರು ವಿನಯಮತಿ. ಈ ರೀತಿಯಾಗಿ ಮೂವರು ಮಾಂಡಲೀಕರು ಸುಖವಾಗಿರಲು ಒಮ್ಮೆ ಪಾಲ್ಗುಣ ನಂದೀಶ್ವರ ಎಂಬ ಹಬ್ಬವು ಬಂದಿತ್ತು. ಈ ಹಬ್ಬವನ್ನು ಮೂವರು ತಮ್ಮ ತಮ್ಮ ಪಟ್ಟಣದಲ್ಲಿ ಮಹಾ ವೈಭವದಿಂದ ಎಂಟು ದಿನಗಳಕಾಲ ತೀರ್ಥಂಕರ ಸೇವೆಯನ್ನು ಮಾಡತೋಡಗಿದರು. ಜಿತಶತ್ರುವಿನ ಊರಿನಲ್ಲಿಯೂ ಉತ್ಸವ ಮಾಡಲಾಯಿತು. ಅವನ ದಾದಿ ವಿನಯಮತಿ ಗುಜ್ಜೆ, ಬೊಚ್ಚುಬಾಯಿವಳು, ವಿರೂಪೆ, ನೋಡಲು ಜಿಗುಪ್ಸೆಯಾಗುವಂತಿದ್ದಳು. ನೋಡಿದವರಿಗೆ ನಾಚಿಕೆ ಉಂಟಾಗುತ್ತಿತ್ತು. ಕಾರಣ ಆ ಅಮಂಗಳೆಯೆಂದು ಜಿನಮಹಾಮಹಿಮೆಯನ್ನು ನೋಡಲು ಬಾರದಂತೆ ತಡೆದನು. ಆಕೆ ಮನೆಯಲ್ಲೇ ವ್ರತಗಳನ್ನು ಆಚರಿಸಿ ದೇವರನ್ನು ಪೂಜಿಸಿ ಕೃಶಳಾದೆಳು. ಅರಸನು ಆಕೆಗೆ ಕರುಣೆಸಿ. ಅವ್ವಾ ನನಗೆ ನಿಮ್ಮ ವ್ರತದಿಂದ ಸಂತೋಷವಾಗಿದೆ ನಿಮಗೆ ಏನು ಆಪೇಕ್ಷೆ ಕೇಳಿರಿ ಎಂದನು. ಅದಕ್ಕೆ ಆಕೆ ಮತ್ತು ಎಂಟುದಿನ ದೇವರಿಗೆ ಮಹಿಮೆ ಮಾಡಲು ಕೇಳಿದಳು. ಆಗಲೂ ಸಹಿತ ಆಕೆ ಅಷ್ಟೋಪವಾಸ ಮಾಡಿದಳು. ಪಾರಣೆಯ ದಿನ ಆಕೆಗೆ ಉಂಟಾಗಿದ್ದ ಶ್ರಮ ಬಳಲಿಕೆಯನ್ನು ನೋಡಿ ಹಿಮವಂತ ಪರ್ವತದ ಪದ್ಮೆಯೆಂಬ ಕೊಳದಲ್ಲಿ ವಾಸವಾಗಿದ್ದ ಶ್ರೀದೇವತೆ ತನ್ನ ಪರಿವಾರ ಸಹಿತ ಮಹಾವೈಭವದಿಂದ ಬಂದು ದಾದಿಯನ್ನು ಚಿನ್ನದ ಪೀಠದಲ್ಲಿ ಕುಳ್ಳಿರಿಸಿ ದೇವದುಂದುಬಿಗಳನ್ನು ಮೊಳಗಿಸಿದಳು. ತಾನೂ ಶ್ರೀದೇವತೆ ಯಾಗುವೆನೆಂದು ನಿಧಾನವನ್ನೇಸಗಿ ಆಕೆ ಕಾಲವಾಗಿ ಶ್ರೀಯಾದೇವತೆಯೇ ಆದಳು. ಇಳಾಪಟ್ಟಣದ ಜನರಿಗೆ ಆಕೆ ಕನಸಿನಲ್ಲಿ ಬಂದು ತನಗೊಂದು ವಿಹಾರವನ್ನು ಕಟ್ಟಿಸಿ ಪೂಜಿಸಿದರೆ ಬೇಡಿದ ವರಕೊಡುವುದಾಗಿ ಹೇಳಿದಳು. ಊರಿನ ಜನರೆಲ್ಲಾ ಒಂದಾಗಿ ಸೇರಿ ಶ್ರೀವಿಹಾರವನ್ನು ಕಟ್ಟಿಸಿ ಶ್ರೀಯಾದೇವತೆ ಪ್ರತಿಮೆಯನ್ನಿಟ್ಟು ಪೂಜಿಸತೊಡಗಿದರು. ಮಕ್ಕಳಿಲ್ಲದ ಇಳಾದೇವಿ ಶ್ರೀಯಾದೇವತೆಯನ್ನು ಹನ್ನೆರಡು ವರ್ಷ ಪೂಜಿಸಿದಳು. ತನ್ನ ಅನುಗ್ರಹದಿಂದ ವರ್ಧಮಾನದೇವನು ನಿನಗೆ ಮಗನಾಗುವನೆಂದು ದೇವತೆ ಅಭಯವಿತ್ತಳು.

ಶ್ರೀಯಾದೇವತೆ ಕರುಣೆಸಿಮದರಿಂದ ಇಳಾದೇವಯ ಮಗನಿಗೆ ಸಿರಿದಿಣ್ಣನೆಂದು ಹೆಸರಿಟ್ಟರು. ಸಿರಿದಿಣ್ಣ ಶುಕ್ಲಪಕ್ಷದ ಚಂದ್ರನ ಹಾಗೆ ಬೆಳದನು. ಯುವಕನಾದನು. ಅವನು ಸಾಕೇತದ ಸುಮಂತರಾಜರ ಮಗಳಾದ ಸುಮತಿಯನ್ನು ವರಿಸಿದನು. ಸುಮಂತನು ಮಗಳಿಗೆ

ಮಾತನಾಡುವ ಗಿಳಿಯನ್ನು ಬಳುವಳಿಯಾಗಿ ಕೊಟ್ಟನು. ಒಮ್ಮೆ ಸಿರಿದಿಣ ಸುಮತಿ ಇಬ್ಬರು ಗಿಳಿಯನ್ನು ಸಾಕ್ಷಿಮಾಡಿಕೊಂಡು ಚದುರಂಗ ವಾಡುತ್ತಿದ್ದಾಗ ಗಿಳಿ ತಪ್ಪುಲೆಕ್ಕ ಬರೆದುದೆನ್ನು ಕಂಡು ಸಿರಿದಿಣ್ಣ ಅದರ ಕೊರಳನ್ನು ಮುರಿದನು ಗಿಳಿಯು ಸತ್ತು ಆ ಪಟ್ಟಣದ ಹೊರ ಭಾಗದಲ್ಲಿ ವ್ಯಂತರ ದೇವನಾಗಿ ಹುಟ್ಟಿತು.

ಈ ದಂಪತಿಗಳು ಒಮ್ಮೆ ಸಪ್ತತಳ ಪ್ರಸಾದಲ್ಲಿದ್ದು ದಿಶಾಲೋಕನ ಮಾಡುವಾಗ ಸಹಸ್ರಕೋಟಾಕಾರದ ಮುಗಿಲನ್ನು ಕಂಡು ಅಂಥಹದೇ ಜೇನಾಲಿಯವನ್ನು ನಿರ್ಮಿಸಬೇಕೆಂದು ಚಿತ್ರ ಬಿಡಿಸುವಾಗ ಅದು ಕರಗಿತು. ಕಾರಣ ಸಿರಿದಿಣ್ಣನಿಗೆ ನಿರ್ವೇಗವುಂಟಾಗಿ ಎಲ್ಲವನ್ನು ತೊರೆದು ವರಧರ್ಮ ಭಟಾರರಲ್ಲಿ ದೀಕ್ಷೆಪಡೆದು ಹನ್ನೆರಡುವರ್ಷ ವಿಹಾರಿಯಾಗಿ ಪ್ರತಿಮಾಯೋಗದಲ್ಲಿದ್ದಾಗ. ವ್ಯಂತರನು ಪೂರ್ವಜನ್ಮದ ವೈರದಿಂದಾಗಿ ಬಿರುಗಾಳಿ ಶೈತ್ಯ ಮಳೆಗಳನ್ನುಂಟು ಮಾಡಿ ಉಪಸರ್ಗಗಳನ್ನು ವಡ್ಡಿದನು. ಸಿರಿದಿಣ್ಣನು ಅದೆಲ್ಲವನ್ನು ಸಹಿಸಿ ಶುಕ್ಲಧ್ಯಾನವನ್ನು ಧ್ಯಾನಿಸಿ ಎಂಟು ಕರ್ಮಗಳನ್ನು ಕೆಡಿಸಿ ಮೋಕ್ಷಕೆ ಹೋದರು.

ಈ ರೀತಿಯಾಗಿ ಉಪವಾಸಾದಿ ತಪಾಚರಣೆ ಹೆಚ್ಚು ಮಹತ್ವವುಳ್ಳದಾಗಿದ್ದು. ಸಿರಿದಿಣ್ಣನಿಗೆ ಸಂಬಂಧಿಸಿದ ಕಥಾಭಾಗ ಮತ್ತು ಆತಸಾಕಿದ ಗಿಳಿಯ ಪಾತ್ರದ ಮುಖಾಂತರ ಕರ್ಮಸಿದ್ಧಾಂತವನ್ನು ಉದಾಹರಿಸಿ. ಕಥಾನಾಯಕ ಉಪಸರ್ಗ-ಪರಿಷಹಗಳನ್ನು ಶಾಂತವಾಗಿ ಸಹಿಸಿ ಮೋಕ್ಷಕ್ಕೆ ಹೋಗಿರುವುದು ಮಹತ್ವವನ್ನು ಈಕಥಾಭಾಗಸಾರುತ್ತದೆ.

ಶೈಕ್ಷಣಿಕ ಪಠ್ಯಗಳ ಚಿಂತನೆಯಾಗಿ ಈ ಕಥೆಯು ಜೈನರು ಆರ್ಚರಿಸುವ ಪಾಲ್ಗುಣ ನಂದೇಶ್ವರ ಉತ್ತಮವಾದ ಆಚರಣೆಯ ಮಹತ್ವ ಕರ್ಮಸಿದ್ಧಾಂತವನ್ನು ಉದಾಹರಣೆ ಮೂಲಕ ವಿವರಿಸಿ ಉಪಸರ್ಗಗಳ ಮಹತ್ವ ತಿಳಿಸುತ್ತೆವೆ.

### ೩.೧೦ ವೃಷಭಸೇನ ಭಟಾರರ ಕಥೆ :

ಈ ಕಥೆಯಲ್ಲಿ ಜೈನ ಮುನಿಯೊಬ್ಬನು ಪರೀಷಹಗಳನ್ನು ಜಯಿಸಿ ಮೋಕ್ಷಕ್ಕೆ ಹೋದ ಪ್ರಸಂಗವನ್ನು ಒಳಗೊಂಡಿದೆ.

ಅವಂತಿ ಎಂಬ ನಾಡು ಅಲ್ಲಿ ಉಜ್ಜಯಿನಿ ಎಂಬ ಪಟ್ಟಣವನ್ನು ಪ್ರದ್ಯೋತನೆಂಬ ಅರಸನು ಆಳುತ್ತಿದ್ದನು. ಅವನ ಹೆಂಡತಿ ಜೋರ್ತಿಮಾಲೆ ಒಂದು ಅರಸನು ಕಾಡಾನೆಯನ್ನು ಹಿಡಿಯಲು ಅಡವಿಗೆ ಹೋಗಿದ್ದನು. ಆನೆಯು ಮದವೇರಿ ಅಂಕೆಗೆ ಸಿಗದೆ ದಿಕ್ಕು ದೆಸೆಯಿಲ್ಲದೆ ಓಡಿ ಹೋಯಿತು. ಅರಸನು ಒಂದು ಮರದ ಕೊಂಬೆಯನ್ನು ಹಿಡಿದು ಪಾರಾಗಿ ಖೇಡ ಎಂಬ ಊರನ್ನು ತಲುಪಿದನು.

ಆ ಊರಿನ ಗೌಡ ಜಿನವಾದಿಕನೆಂಬುವನು ಅವನ ಮಡದಿ ಜಿನಮತಿ ಅವರ ಒಬ್ಬಳೇ ಮಗಳು ಜಿನದತ್ತ. ಅತ್ಯಂತ ರೂಪ ಲಾವಣ್ಯ ಕಾಂತಿಯಿಂದ ಕೂಡಿದ ಜಿನದತ್ತ ನೀರು ತರಲೆಂದು ಬಾವಿಗೆ ಹೋಗಿದ್ದಳು. ಅರಸನು ಕುಡಿಯಲು ನೀರು ಎರೆಯುವಿಯೂ ಎಂದು ಆಕೆಯನ್ನು ಕೇಳಿದಾಗ ಜಿನದತ್ತ ಅರಸನಿಗೆ ನೀರರೆದಳು. ಮನೆಗೆ ಹೋದ ಜಿನದತ್ತ ತನ್ನ ತಂದೆಯನ್ನು ಕುರಿತು ಅಪ್ಪಾ ಊರ ಹೊರೆಗೆ ಬಾವಿಯ ಬಳಿ ಒಬ್ಬ ಮಹಾಪುರುಷನು ಬಂದಿದ್ದಾನೆ. ಅವನನ್ನು ಮನೆಗೆ ಕರೆತನ್ನಿ ಎಂದಳು. ಜಿನವಾದಿಕನು ಹಾಗೆ ಆಗಲೆಂದು ಅಗಸನನ್ನು ಮನೆಗೆ ಕರೆತಂದು ಸತ್ಕರಿಸಿ ಅರಸನೆಂದರಿತು ಮಹಾಭಕ್ತಿಗೌರವ ಸಲ್ಲಿಸಿ ಸತ್ಕರಿಸಿದನು. ಅರಸನ ಹೆಗ್ಗಡೆಗಳ ಮೂಲಕ ಗೌಡನ ಮಗಳನ್ನು ಬೇಡಿ ಒಪ್ಪಿಗೆ ಪಡೆದು ಮದುವೆ ಮಾಡಿಕೊಂಡು ಪಟ್ಟದ ರಾಣಿಯಾಗಿ ಸುಂದರವಾದ ಮನೆಯಲ್ಲಿ ಸಕಲ ವೈಭವಗಳಿಂದ ಅವಳನ್ನು ಇರಿಸಿ ಸುಖವಾಗಿದ್ದನು.

ಒಮ್ಮೆ ಒಂದು ಕಾಡಾನೆ ಹಿಂಡಿನೊಡನೆ ಒಂದು ಖೆಡ್ಡವನ್ನು ಹೊಕ್ಕಿತು. ಅರಸನು ಅದನ್ನು ಹಿಡಿಯಲು ಹೋದಾಗ ಜಿನದತ್ತೆ ಅರಸ ತನ್ನನ್ನು ಬಿಟ್ಟು ಹೋದುದರಿಂದ ಕೋಪಿಸಿಕೊಂಡು ತನ್ನ ಮನೆ ಬಿಟ್ಟು ಬ್ರಹ್ಮಚಾರಿತ್ವವನ್ನು ಕೈಗೊಂಡಳು. ಇತ್ತ ರಾಜನು ಜಿನದತ್ತೆಯ ಸಂಗತಿಯನ್ನುರಿತು. ಆಳುಗಳನ್ನು ಕರೆಯಿಸಿ ಆಕೆಯನ್ನು ಸ್ಮಶಾನದಲ್ಲಿರಿಸಿ ಬರಲು ಅಪ್ಪಣೆ ಮಾಡಿದನು. ಆಕೆ ಒಂಬತ್ತು ತಿಂಗಳು ಗರ್ಭಿಣಿಯಾದುದರಿಂದ ಅಂದೇ ರಾತ್ರಿ ಜಿನದತ್ತ ಅದೇ ಸ್ಥಳದಲ್ಲಿ ಗಂಡು ಮಗುವನ್ನು ಜನ್ಮವಿತ್ತಳು. ಅಂದು ರಾತ್ರಿ ಅರಸನು ಕೂಡಾ ಕನಸಿನಲ್ಲಿ ಬಿಳಿಯ ವೃಷಭವನ್ನು ಕಂಡನು. ಮರುದಿನ ಬೆಳಿಗ್ಗೆ ತಾನು ಕಂಡ ಕನಸನ್ನು ಮಂತ್ರಿಗೆ ವಿವರಿಸಲು ಅವನು ದೇವಾ ನಿಮಗೆ ಪುತ್ರಲಾಭವಾಗಿದೆ ಎಂದನು. ಅರಸನು ಜಿನದತ್ತೆಯಿಂದಲೇ ತನಗೆ ಪುತ್ರಲಾಭವಾದುದರಿಂದ ಆಕೆಯನ್ನು ಅರಮನೆಗೆ ಕರೆಸಿ ಮಗನಿಗೆ ವೃಷಭಸೇನನೆಂಬ ಹೆಸರಿಟ್ಟು ಸುಖವಾಗಿದ್ದನು.

ಕುಮಾರ ವೃಷಭಸೇನನಿಗೆ ಎಂಟು ವರ್ಷವಾಯಿತು ಅರಸನು ಮಗನಿಗೆ ರಾಜಪಟ್ಟ ಕಟ್ಟಿ ತಪಸ್ಸಿಗೆ ತೆರಳಲು ಉದ್ಯುಕ್ತನಾದಾಗ ವೃಷಭಸೇನನು ರಾಜ್ಯಾಧಿಕಾರಕ್ಕೆ ಒಪ್ಪದೆ ಮೋಕ್ಷರಾಜ್ಯಕ್ಕೆ ಹೊರಡಲು ಸಿದ್ಧನಾದಾಗ ರಾಜನು ಜೊರ್ತಿಮಾಲೆಯ ಮಗ ವಸುಪಾಳನಿಗೆ ಪಟ್ಟ ಕಟ್ಟಿದನು. ತಂದೆ ಮಕ್ಕಳಿಬ್ಬರು ಗುಣಧರಾಚಾರ್ಯರಲ್ಲಿ ದೀಕ್ಷೆತಾಳಿ ಹನ್ನೆರಡು ವರ್ಷ ಆಗಮಗಳನ್ನು ಕಲಿತು ಭಟಾರರ ಅನುಮತಿ ಪಡೆದು ವೃಷಭಸೇನಾಚಾರ್ಯ ಸಂಚರಿಸುತ್ತಾ ಕಾಸಂಬಿ ಸಮೀಪದ ಉದಯಾವತ ಪರ್ವತದಲ್ಲಿ ನಾಲ್ಕು ತಿಂಗಳು ಅತಪಸ್ಥಿತಯೋಗ ಕೈಗೊಂಡರು.

ಆ ಪಟ್ಟಣದಲ್ಲಿದ ಬುದ್ಧಜನೆಂಬ ಉಪಾಸಕನು ಋಷಿಗಳ ಮೇಲೆ ಮತ್ಸರ ತಾಳಿ ಭಿಕ್ಷೆಗಾಗಿ ಊರಿನೊಳಕ್ಕೆ ಹೋಗಿದ್ದಾಗ ಯೋಗ ಶಿಲೆಯ ಮೇಲೆ ಸೌದೆಗಳನ್ನೊಟ್ಟೆ ಕಿಚ್ಚಿಕ್ಕಿ ಶಿಲೆ

ಕಂಡವಾಗುವಂತೆ ಮಾಡಿ ತೆರಲಿದನು. ಆ ವೇಳೆಗೆ ಭಿಕ್ಷೆಯಿಂದ ಹಿಂದಿರುಗಿದ ವೃಷಭಸೇನ ಭಟಾರರು ಬೆಂಕಿಯಂತೆ ಕೆಂಪಗೆ ಕಾದಿದ್ದ ಆ ಬಂಡೆಯನ್ನು ನೋಡಿ 'ನಮಗೆ ಇಷ್ಟೇ ಆಯುಷ್ಯ' ಎಂದು ತೀರ್ಮಾನಿಸಿಕೊಂಡು ಚತುರ್ವಿಧ ಆಹಾರವನ್ನು ಶರೀರವನ್ನು ತ್ಯಾಗಮಾಡಿ ಕಾದ ಯೋಗವೇಶವನ್ನೇರಿ ಕಾರ್ಯೋತ್ಸರ್ಗಮಾಡಿ ಕರ್ಮಗಳನ್ನು ಕಳೆದು ಮೋಕ್ಷಕ್ಕೆ ಹೋದರು. ಪ್ರದ್ಯೋತ ಋಷಿಯೂ ಸಮಕ್ಯದರ್ಶನ ಚಾರಿತ್ರಗಳನ್ನು ಸಾಧಿಸಿ ಸ್ವರ್ಗದಲ್ಲಿ ಹುಟ್ಟಿದರು.

ಶೈಕ್ಷಣಿಕವಾಗಿ ಸಮ್ಯಕ ದರ್ಶನ ಚಾರಿತ್ರ್ಯಗಳು, ಅಂದರೆ ಲೋಕ ಮೂಢ, ದೇವಮೂಢ, ಪಾಷಂಢಿ ಮೂಢ ಈ ಮೂರು ಮೂಢಗಳ ಮುಕ್ತಿ, ಸಮ್ಯಕ ದರ್ಶನವಿರುವ ವ್ಯಕ್ತಿ, ಬುದ್ದಿ, ದೇವರ ಉತ್ಸವ, ಜಾತಿ, ಮಾನಸಿಕ ಸಾಮರ್ಥ್ಯ, ಇಂದ್ರ ಚಾಲನ ಶಕ್ತಿ, ತಪಸ್ಸು, ಸೌಂದರ್ಯಮದಗಳನ್ನು ತ್ಯಜಿಸಬೇಕೆಂದು ಪಥ್ಯವಾಗಿ ತಿಳಿಸುತ್ತದೆ.

## ೫.೧೧ **ಕಾರ್ತಿಕ ಋಷಿಯ ಕಥೆ** :

ರಾಜನು ನೀತಿ ಧರ್ಮದ ಕಟ್ಟಳೆಗೆ ಒಳಗಾಗಿರಬೇಕು ಎಂಬ ಭಾವನೆ ಈ ಕಥೆಯಲ್ಲಿದೆ. ತಂದೆಯೂ ಸೌಂದರ್ಯ ಮೋಹದಿಂದ ಮಗಳನ್ನೇ ಮದುವೆಯಾಗಿ ತನ್ನ ಮಗಳಿಂದಲೇ ಹುಟ್ಟಿದ ಮಗ ಕಾರ್ತಿಕ ದೀಕ್ಷೆ ತಪಸ್ಸುಗಳಿಂದ ಹೇಗೆ ಮಹಾಪುರುಷ ನಾಗುತ್ತಾನೆಂಬುದು ಈ ಕಥೆಯು ವಿವರಿಸುತ್ತದೆ.

ಲಾಳ ದೇಶದಲ್ಲಿ ಕೃತ್ತಿಕಾಪುರವೆಂಬ ಪಟ್ಟಣ. ಆ ಪಟ್ಟಣವನ್ನು ಅಗ್ನಿದೇವ ಅವನ ಹೆಂಡತಿ ವೀರಮತಿ. ಇವರಿಗೆ ಬಂಧು ಮತಿ ಶಿವಸೇನೆ, ಶ್ರೀಮತಿ, ಸ್ವಯಂಪ್ರಭೆ, ಲಕ್ಷ್ಮೀಮತಿ, ಕೃತ್ತಿಕೆ ಎಂಬ ಆರು ಜನ ಹೆಣ್ಣುಮಕ್ಕಳು. ಒಮ್ಮೆ ಪಾಲ್ಗುಣ ಮಾಸದ ನಂದೀಶ್ವರ ಉತ್ಸವವೆಂದು ಆರುಜನ ಉಪವಾಸವಿದ್ದು ಬಸದಿಗೆ ಅರ್ಚನೆ ಮಾಡಿ ಸಿದ್ದಶೇಷೆಯನ್ನು ತಂದು ತಂದೆ-ತಾಯಿಗೆ ಕೊಟ್ಟರು. ಆ ಸಂದರ್ಭದಲ್ಲಿ ಅರಸನು ತನ್ನ ಕಿರಿಯ ಮಗಳು ಕೃತ್ತಿಕೆಯ ರೂಪ, ತೇಜಸ್ಸು, ಲಾವಣ್ಯಗಳನ್ನು ಕಂಡು ಮೋಹಿತನಾಗಿ ಅಗ್ನಿದೇವನು ಅವಳನ್ನು ಮದುವೆಯಾದನು. ವೀರಮತಿ ರಾಣಿಯಾದರೂ ಆ ದಿನವೇ ಬ್ರಹ್ಮಚರ್ಯವನ್ನು ಕೈಗೊಂಡಳು.

ಕೃತ್ತಿಕೆಗೆ ಗರ್ಭವಾಯಿತು ಒಂಬತ್ತು ತಿಂಗಳು ತುಂಬಿತ್ತು ಸರವಣ ಎಂಬ ಉದ್ಯಾನದಲ್ಲಿ ಸರವಣ ಕೊಳದಲ್ಲಿ ಜಲಕ್ರೀಡೆಯಾಡಬೇಕೆಂಬ ಬಯಕೆಯುಂಟಾದಾಗ ಅರಸ ಅದನ್ನು ಅನಕೂಲ ಮಾಡಿಕೊಟ್ಟನು ಜಲಕ್ರೀಡೆಯಾಡಿ ಮಗನನ್ನು ಹೆತ್ತಳು. ಆ ಮಗುವಿಗೆ ಸ್ವಾಮಿ ಕಾರ್ತಿಕ ಎಂದು ಹೆಸರಿಟ್ಟರು. ಆನಂತರ ಜನಿಸಿದ ಹೆಣ್ಣು ಮಗಳು ವೀರಶ್ರೀ. ಆಕೆಯನ್ನು ಕೋಗಳಿಯ ಕ್ರೌಂಚರಾಜನಿಗೆ ಕೊಟ್ಟರು. ಕಾರ್ತಿಕನು ಇತರ ತಮ್ಮಂದಿರೊಡನೆ ಬೆಳೆದು ಹದಿನಾರು ವರ್ಷದವನಾದನು.

ಒಂದು ದಿನ ಎಲ್ಲಾ ಕುಮಾರರು ಉದ್ಯಾನವನಕ್ಕೆ ಆಡಲು ಹೋಗಿದ್ದರು. ಆ ಮಕ್ಕಳಿಗೆ ಅವರವರ ಅಜ್ಜಂದಿರು ಮನೆಗಳಿಂದ ಉಡಲು ಬಟ್ಟೆ, ತಿನ್ನಲು ತಿಂಡಿ-ತೀರ್ಥ ಕಳುಹಿಸಿದ್ದರು ಆದರೆ ಕಾರ್ತಿಕನಿಗೆ ಮಾತ್ರ ಯಾರು ಏನನ್ನು ಕಳುಹಿಸಲಿಲ್ಲ. ಆಗ ಕಾರ್ತಿಕನು ಮನಸ್ಸಿನಲ್ಲಿ ಬೇಜಾರು ಪಟ್ಟು ತನ್ನ ಅಜ್ಜಯಾರು ಎಂದು ತಾಯಿಯನ್ನು ಕೇಳಿದಾಗ ತನ್ನ ತಂದೆಯೇ ತನ್ನ ಅಜ್ಜನೆಂದು ತಾಯಿ ಹೇಳಿದಳು. ಈ ಮಾತೇ ಕಾರ್ತಿಕನಿಗೆ ವೈರಾಗ್ಯವುಂಟಾಯಿತು. ಒಡನೆಯೇ ಶ್ರೀವರನೆಂಬ ಆಚಾರ್ಯರನ್ನು ಆಶ್ರಯಿಸಿ ದೀಕ್ಷೆಯನ್ನು ಪಡೆದು ತಪಸ್ಸು ಮಾಡಿ ಆಗಮಗಳನ್ನು ಕಲಿತು ಏಕವಿಹಾರಿಯಾಗಿ ಕಿಷ್ಕಿಂದಿ ಪರ್ವತಕ್ಕೆ ಬಂದು ಪ್ರತಿಮಾಯೋಗದಲ್ಲಿದ್ದನು. ರಾತ್ರಿ ಮಳೆ ಬಂದು ಅವರ ಮೈಯ ಕೆಸರನ್ನು ತೊಳೆದ ಆ ನೀರು ಪಾಷಾಣವೆಂಬ ಮಡುವಿನೆಲ್ಲಿ ಸೇರಿ ಆಮಡು ಸರ್ವೌಷಧಿಯಾಗಿ ತೀರ್ಥವಾಯಿತು.

ಕಾರ್ತಿಕ ಋಷಿ ಆಮೇಲೆ ಕೋಗಳಿಗೆ ಬಂದಾಗ ತಂಗಿಯಾದ ವೀರಶ್ರೀ ಮಹಾದೇವಿಯ ತೊಡೆಯ ಮೇಲೆ ಅರಸನು ತಲೆಯಿಟ್ಟು ನಿದ್ರಿಸುತ್ತಿದ್ದನು. ಒಡನೆಯೇ ನನ್ನ ಅಣ್ಣಂದಿರಾದ ಋಷಿಗಳು ಬಂದರು ಎಂದು ನಿದ್ರಿಸುತ್ತಿದ್ದ ತನ್ನ ಗಂಡನ ತಲೆಗೆ ಬೇರೆ ಆಧಾರವನ್ನು ಇರಿಸಿ ಅಣ್ಣನ ಬಳಿಗೆ ಬಂದು ಪ್ರಾರ್ಥಿಸುವಾಗ ರಾಜನು ಎಚ್ಚೆತ್ತು ನಿತ್ಯವು ಆಕೆ ಸವಣನಲ್ಲಿ ಹೋಗುತ್ತಿರಬೇಕೆಂದು ಸಂಶಯ ಪಟ್ಟು. ಶಕ್ತಿ ಆಯುಧದಿಂದ ಎದೆಯನ್ನು ಸೀಳಿ, ಅರಸಿಯ ತೆಲೆಗೊದಲನ್ನು ಹಿಡಿದು ದರದರನೆ ಎಳೆದು ತಂದನು.

ಸ್ವಾಮಿ ಕಾರ್ತಿಕ ಋಷಿ ಕ್ಷಮೆಯನ್ನು ಬಗೆದು, ರಕ್ತ ಸುರಿದು, ಶಕ್ತಿ ಕುಂದಿ ಬೇಸಿಗೆಯ ಬಿಸಿಲಿನಿಂದಲೂ ಅದರ ತಾಪದಿಂದಲೂ ಬಾಯಾರಿಕೆಯಿಂದ ತಂಪಾದ ಸ್ಥಳವನ್ನು ಆಶಿಸುತ್ತಿರಲು ಅಷ್ಟರಲ್ಲಿ ಅಜ್ಜಿಯಾದ ವೀರಮತಿ ವ್ಯಂತರ ದೇವತೆಯಾಗಿ ನವಿಲಿನ ರೂಪದಲ್ಲಿ ಬಂದು ಕಾರ್ತಿಕ ಋಷಿಯನ್ನು ಎತ್ತಿಕೊಂಡು ಕೋಗಳಿನಾಡಿನ ಪೂರ್ವಕ್ಕೆ ಇದ್ದ ಪರ್ವತದ ಕೊಳದ ಬಳಿ ಬಂದು ಲತಾಮಂಟಪದಲ್ಲಿರಿಸಿ ಹೋದಳು. ಬೆಟ್ಟದ ಮೇಲಿನ ಹರಿಯುತ್ತಿರುವ ತುಂತುರ ಹನಿಯಿಂದಾಗಿ ಶರೀರಕ್ಕೆ ಹಿತವಾಯಿತು. ಅವರು ಸಂನ್ಯಸನ ಮಾಡಿ ಶುಭಪರಿಣಾಮದಿಂದ ಸತ್ತು ಸರ್ವಾರ್ಥ ಸಿದ್ಧಿಯಲ್ಲಿ ಮೂವತ್ತು ಮೂರು ಸಾಗರ ವರ್ಷ ಆಯುಷ್ಯವುಳ್ಳ ಅಹಮಿಂದ್ರನಾಗಿ ಹುಟ್ಟಿದರು.

ಇತ್ತ ಭಟಾರರ ತಂಗಿಯಾದ ವೀರಶ್ರೀ ಋಷಿಯನ್ನು ನೆನೆದು ಪ್ರಲಾಪಿಸುತ್ತಿರಲು ಅರಸನು ತನ್ನ ರಾಣಿಯ ದುಃಖವನ್ನು ಪರಿಹರಿಸಿದವರಿಗೆ ಬೇಡಿದ ಉಡುಗೊರೆ ಕೊಡುವನೆಂದಾಗ ಹಲವು ಜನರ ಹಗರಣದ ವೇಷಗಳನ್ನು ಆಕೆ ಮುಂದೆ ಹಾಡಿ ಕುಣಿವರೂ ಆಕೆ ಅಳುವೂ ನಿಲ್ಲಲಲ್ಲಿ. ಆಗ ಒಬ್ಬ ಕರಿಯ ಕೌಪೀನ ಧರಿಸಿ ಮೈಗೆ ಮಸಿ ಬಳಿದು ವಿಕಾರವೇಷದಲ್ಲಿದ್ದನ್ನು ಕಂಡು ದುಃಖವನ್ನು ಮರೆತು ನಕ್ಕಳು, ನಗಿಸಿದ ಹಗರಣಿಗನಿಗೆ

ವಿಶೇಷವಾದ ಬಹುಮಾನ ಸಿಕ್ಕಿತು. ಅಂದಿನಿಂದ ಐತಿಹಾಸಿಕವಾಗಿ ಬಾದುಬ್ಬೆ ಹಬ್ಬವೂ ಪಗರಣದ ಆಟಪಾಟಗಳು ರೂಢಿಗೆ ಬಂದವು.

ಈ ಕಥೆಯಲ್ಲಿ ಶ್ರಾವಕ ವ್ರತಗಳು ಮುನಿಧರ್ಮದ ವೃತಗಳು ಮುನಿಧರ್ಮದಲ್ಲಿ ಒಂದಾದ ಭಾಷಾ ಸಮಿತಿಯ (ಮಾತಿನಲ್ಲಿ ಎಚ್ಚರಿಕೆ ವಹಿಸುವ) ಮಹತ್ವ ಸಾರುತ್ತದೆ. ಕಾರ್ತಿಕ ಮುನಿಗಳ ದೇಹವನ್ನು ತೊಳೆದೊಯ್ಯುವ ಮಳೆನೀರು ಸರ್ವಾರೋಗೌಷಧಿಯಾಗಿ ಪರಿವರ್ತನೆಗೊಳ್ಳುವುದು (ಅತಿಮಾನುಷ ಶಕ್ತಿ)ಯ ಘನತೆಯನ್ನು ತೋರಿಸುತ್ತದೆ.

ಪಥ್ಯಗಳ ದೃಷ್ಟಿಯಿಂದ ಈ ಕಥೆಯು ಅಹಿಂಸಾ, ಸತ್ಯ, ಅಸ್ತೇಯ ಬ್ರಹ್ಮಚರ್ಯ, ದುರಾಸೇ ಭೋಗ ವಸ್ತುಗಳ ದೂರ ಎಂಬ ಅಣುವ್ರತಗಳನ್ನು ಉಪದೇಶ ರೂಪದಲ್ಲಿ ಮುನಿಗಳಿಗೆ ವಿಧಿಸಿ, ಆದರ ಮಹತ್ವ ತಿಳಿಯಪಡಿಸುತ್ತದೆ.

## ೫.೧೨ ಅಭಯ ಘೋಷ ಮುನಿಯ ಕಥೆ:

ಈ ಕಥೆಯು ಪಾಪವು ತನ್ನೊಂದು ಅಶುಭದ ಪರಿಣಾಮವಾಗಿ ಮುಂದಿನ ಜನ್ಮಕ್ಕೆ ಹೇಗೆ ಕಾರಣವಾಗುತ್ತದೆ ಎಂಬುದನ್ನು ಸೂಚಿಸುತ್ತದೆ.

ಮಗದೆ ಎಂಬ ನಾಡಿನ ಕಾಕಂದಿ ಎಂಬ ಪಟ್ಟಣವನ್ನು ಅಭಯಘೋಷವೆಂಬ ಅರಸನು ಆಳುತ್ತಿದ್ದನು. ಅವನ ಹೆಂಡತಿ ಅಭಯಮತಿ ಬಂದು ಅರಸರು ಊರ ಹೊರಗಿನ ಸೌಂದರ್ಯವನ್ನು ನೋಡುತ್ತಾ ಹೊರಟಾಗ ಒಬ್ಬ ಬೆಸ್ತನು ಆಮೆಯ ನಾಲ್ಕು ಕಾಲುಗಳಿಗೆ ಹಗ್ಗ ಕಟ್ಟಿ ನೇತಾಡುವಂತೆ ಕೊರಳಲ್ಲಿ ಕಟ್ಟಿಕೊಂಡು ಬರತೊಡಗಿದಾಗ ಅರಸನು ತನ್ನ ಕರಕುಶಲತೆ ಜನಸಾಮಾನ್ಯರಿಗೆ ತೋರಿಸಬೇಕೆಂದು. ದೂರದಿಂದಲೇ ಚಕ್ರದಿಂದ ಹೊಡೆದು ನಾಲ್ಕು ಕಾಲುಗಳನ್ನು ಕತ್ತರಿಸಿದನು. ಆ ರಾತ್ರಿ ಅಪಾರವಾದ ವೇದನೆಯಿಂದ ಸತ್ತು ಆ ಆಮೆ ಅಭಯಮತಿ ಅಭಯಘೋಷರಿಗೆ ಚಂಡವೇಗನೆಂಬ ಮಗನಾಗಿ ಹುಟ್ಟಿತು.

ಒಂದು ದಿನ ಅರಸ ಅರಸಿಯೊಂದಿಗೆ ಉಪ್ಪರಿಗೆ ಮೇಲಿಂದ ಚಂದ್ರಗಹಣವನ್ನು ನೋಡಿದ್ದರ ಪರಿಣಾಮವಾಗಿ ಅರಸನು ವೈರಾಗ್ಯವನ್ನು ತಾಳಿ ಚಂಡವೇಗನಿಗೆ ಪಟ್ಟಕಟ್ಟಿ. ನಂದರರೆಂಬ ಆಚಾರ್ಯರಿಂದ ದೀಕ್ಷೆ ಪಡೆದು. ವಿಹಾರಿಸುತ್ತ ಕಾಕಂದಿಯ ಉದ್ಯಾನದಲ್ಲಿ ವೀರಾಸನದಲ್ಲಿ ತಪಸ್ಸಿನಲ್ಲಿದ್ದಾಗ ಚಂಡವೇಗನು ತನ್ನ ಚಕ್ರದ ಗುರಿಯನ್ನು ಪರೀಕ್ಷಿಸುವುದಕ್ಕಾಗಿ ಪ್ರಯೋಗಿಸಿದಾಗ ಋಷಿಯ ಕೈ-ಕಾಲುಗಳು ಕತ್ತರಿಸಿದಾಗ. ಋಷಿಯ ವೇದನೆಯನ್ನು ಸಹಿಸಿ ರತ್ನತ್ರಯಗಳನ್ನು ಸಾಧಿಸಿ ಇಪ್ಪತ್ತುಸಾಗರ ಆಯುಷ್ಯವುಳ್ಳ, ಇಂದ್ರನಾಗಿ ಹುಟ್ಟಿದರು.

ಈ ಕಥೆಯು ಜೈನ ಕರ್ಮಸಿದ್ಧಾಂತವು ಕೆಳಪ್ರವಾಹದಂತೆ ಹರಿಯುತ್ತದೆ. ಧಾರ್ಮಿಕ, ಆಧ್ಯಾತ್ಮಿಕ ತತ್ವಗಳ ಚರ್ಚೆ ಕ್ವಚಿತ್ತಾಗಿ ಕಂಡುಬಂದು. ಯಾವ ವರ್ಣಾನಾತ್ಮಕ ಭಾಗಗಳಿಲ್ಲದೆ ಪೌರಾಣಿಕ ಧಾರ್ಮಿಕ ಮಹಾಪುರುಷ ತಮಗಾದ ಉಪಸರ್ಗಗಳನ್ನು ಶಾಂತವಾಗಿ ಸಹಿಸಿ ರತ್ನತ್ರಯ ಸಾಧಿಸ ಹೊರಟ ಕಥೆಯಿದಾಗಿರುತ್ತದೆ.

ನೀತಿ ಕಥೆಯಾಗಿ ಶೈಕ್ಷಣಿಕವಾಗಿ ಸರಿಯಾದ ನಂಬಿಕೆ ಸರಿಯಾದ ತಿಳುವಳಿಕೆ ಸರಿಯಾದ ಆಚರಣೆ. ಎಂಬ ಮೂರು ತತ್ವಗಳಿಂದಾಗಿ ಸರ್ವರೋಗಪಹಾರಿಯಾದ ವಿಶ್ವರೋಗವನ್ನು ಗುಣ ಪಡಿಸುವ ತತ್ವವನ್ನು ಪ್ರತಿಪಾದಿಸುತ್ತದೆ.

### ೫.೧೩ ವಿದ್ಯುಚ್ಚೋರ ರಸಿಯ ಕಥೆ :

ಈ ಕಥೆಯು ವಿದ್ಯುಚ್ಚೋರ ನೆಂಬ ಅರಸನು ಕುಮಾರನು ಚೋರವಿದ್ಯೆ ಕಲಿತು. ಅದೆಲ್ಲವನ್ನು ಸನ್ಯಾಸನಾದ ವಿವರಣೆ ಉಪಸರ್ಗಗಳನ್ನು ಸಹಿಸಿದ ಸನ್ನಿವೇಶಗಳನ್ನು ಒಳಗೊಂಡಿದೆ.

ಅಭೀರನಾಡಿನ ವೇಣಾತಟ ಎಂಬ ಪಟ್ಟಣದ ಅರಸು ಜೀತಶತ್ರು ಆತನ ಮಡದಿ ವಿಜಯಮತಿಯರಿಗೆ ವಿದ್ಯುಚ್ಚೋರನೆಂಬ ಮಗನು ಹುಟ್ಟಿದನು. ಅದೇ ಪಟ್ಟಣದ ಯಮಪಾಶನೆಂಬ ತಳಾರನ ಮಗನಾದ ಯಮದಂಡನು ಇಬ್ಬರು ಸಮಾನ ವಯಸ್ಸಿನವರಾದ ಕಾರಣ ಸಿದ್ಧಾರ್ಥರೆಂಬ ಉಪಾಧ್ಯಾಯರ ಬಳಿಯಲ್ಲಿ ವ್ಯಾಕರಣ, ಪ್ರಮಾಣ, ಛಂದ, ಅಲಂಕಾರ ಮೊದಲಾದ ಸಕಲ ವಿದ್ಯೆಯೊಂದಿಗೆ ತಳಾರನ ಮಗನಾದ ಯಮದಂಡನು ಕಳ್ಳರನ್ನು ಹಿಡಿಯತಕ್ಕ ಸುರಖವೆಂಬು ವಿದ್ಯೆ ಕಲಿತನು. ವಿದ್ಯುಚ್ಚೋರನು ಅದೇ ಉಪಾಧ್ಯಾಯನ ನಿಂದ ಕಳವಿನ ವಿದ್ಯಯಾಗಿರುವ ಕರಪಟ ಶಾಸ್ತ್ರಗಳನ್ನು ಕಲಿತನು. ಇಬ್ಬರೂ ಒಮ್ಮೆ ವನಕ್ರೀಡೆಗೆ ಬಂದು ಉಳಿಸೆಂಡಾಟವಾಡುತ್ತಿರಲು. ಯಮದಂಡನು ಯಾರಿಗೂ ಕಾಣಿಸದಂತೆ ಇರುವ ಅಲೋಕನ ವಿದ್ಯೆಯನ್ನು ಬಲ್ಲವನಾದುದರಿಮದ ಎಲ್ಲೋ ಅವಿತುಕೊಂಡಿದ್ದನು. ವಿದ್ಯುಚ್ಚೋರನು ಎಲ್ಲಾ ಕಡೆಗೂ ಹುಡುಕಿ ಬೇಸತ್ತು. ನೀನು ತಳಾರನಾದಾಗ ನಿನ್ನ ಕಾವಲಿರುವಾಗಲೆ ನಾನು ಕಳವು ಮಾಡಿ ನಿನ್ನನ್ನು ಕೊಲ್ಲಿಸುತ್ತದೆಂದನು. ಅದಕ್ಕೆ ಪ್ರತಿಯಾಗಿ ಯಮದಂಡನು ನಾನು ತಳಾರನಾಗಿರಲು ನೀನು ಕದ್ದರೆ ನಿನ್ನನ್ನು ಬಂಧಿಸಿ ಶಿಕ್ಷಿಸುತ್ತೇನೆಂದನು. ಆದರೆ ಯಮದಂಡನು ವಿದ್ಯುಚ್ಚೋರ ತಳಾರನಾಗಲು ಒಪ್ಪದೆ ಮಿದಿಳೆಯ ಪದ್ಮರಸನೆಂಬ ಅರಸನ ತಳಾರವಾದನು. ಈ ಸಂಗತಿಯನ್ನು ಅರಿತ ವಿದ್ಯುಚ್ಚೋರನು ವಜ್ರಸೇನನೆಂಬ ಹೆಗ್ಗಡೆಗೆ ತಾತ್ಕಾಲಿಕವಾಗಿ ರಾಜ್ಯವನ್ನುಪ್ಪಿಸಿ ಮಿದಿಳೆಯ ಪಟ್ಟಣಕ್ಕೆ ಬಂದು ಅಂಜನ ಘಟಕೆಗಳಿಂದ ಹಗಲು

ಕುಷ್ಟರೋಗಿಯಂತಿದ್ದ ರಾತ್ರಿಯಲ್ಲಿ ದಿವ್ಯದೇಹದಾರಿಯಾಗಿ ಸಂಪತ್ತನ್ನು ಅಪಹರಿಸಿ ಇಷ್ಟವಾದ ಗಣಿಕೆಯ. ಕೂಡ ಸುಖವನ್ನು ಅನುಭವಿಸುತ್ತಿದ್ದನು.

ಒಂದು ದಿನ ವಿದ್ಯುಚ್ಚೋರನ ಅಂಜನ ಹಚ್ಚಿಕೊಂಡು ವಾಮರಥನ ಅರಮನೆ ಹೊಕ್ಕು. ಅನರ್ಘವಾದ ಸರ್ವರುಚಾಪಹಾರವೆಂಬ ಹಾರವನ್ನು ಕದ್ದನು. ಆಗ ಅರಸನು ಯಮದಂಡನನ್ನು ಕರೆಯಿಸಿ ನೀನು ಕಳ್ಳನನ್ನು ಹಿಡಿಯದಿದ್ದರೆ. ಕಳ್ಳನಿಗೆ ಕೊಡುವ ಶಿಕ್ಷೆ ನಿನಗೆ ಕೊಡುವೆನೆಂದು ಅಬ್ಬರಿಸಿದನು. ತಳಾರನು ಏಳು ದಿನಗಳ ಅವಧಿಗಳನ್ನು ಪಡೆದುಕೊಂಡು. ಏಳನೆ ದಿನ ತೊನ್ನುದೇಹದಾರಿ ವಿದ್ಯುಚ್ಚೋರನ್ನು ಹಳ್ಳವನ್ನು ಹಾರಿದುದನ್ನು ಕಂಡು ಅವನೇ ಕಳ್ಳನೆಂದು ಬಂದಿಸಿ ರಾಜನ ಬಳಿಗೆ ಕರೆತಂದು ಘಟಿಕಾಂಜನ ಮತ್ತು ಪ್ರತಿಘಟಿಕಾಂಜನಗಳ ಪ್ರಯೋಗದಿಂದ ಕಳ್ಳನೆಂದು ರುಜು ಪಡಿಸಿದನು. ಯಮದಂಡನು ಇತನನ್ನು ಶಿಕ್ಷಿಸುವುದಕ್ಕಾಗಿ ೩೨ ದಂಡನೆಗಳನ್ನು ಕೊಟ್ಟರು ಕಳ್ಳನಲ್ಲನೆಂದರಿತು ರಾಜನು ಯಮದಂಡನಿಗೆ ಶೂಲಕ್ಕೆ ಆಜ್ಞೆ ಮಾಡಲು. ತೊನ್ನನ್ನು ತನ್ನ ನಿಜರೂಪ ತೋರಿಸಿ ಯಮದಂಡನಿಗೆ ಬಿಡಿಸಿದನು. ತಾನು ಅಪಹರಿಸಿದ ವಸ್ತುಗಳನ್ನು ಕೊಟ್ಟುದರಿಂದ ಯಮದಂಡನಿಗೆ ಕ್ಷಮೆ ದೊರೆಯಿತು.

ವಿದ್ಯುಚ್ಚೋರನು ಯಮದೂತನೊಡನೆ ತನ್ನ ಪಟ್ಟಣಕ್ಕೆ ಬಂದು ತನ್ನ ಹಿರಿಯ ಮಗನಾದ ವಿದ್ಯುದಂಗೆನೆಂಬವನಿಗೆ ಪಟ್ಟ ಕಟ್ಟಿ. ಪರಿಗ್ರಹಗಳನ್ನು ತೊರೆದು ಗುಣಧರಾಚಾರ್ಯರಲ್ಲಿ ದ್ವಾದಶಾಂಗ ಚತುರ್ದಶಪೂರ್ವವಾದ ಆಗಮಗಳನ್ನು ಕುರಿತು ಉಗ್ರವಾದ ತಪಸ್ಸುಮಾಡಿ ವರಾಂಗನೆಯ ಎಂಬ ಉಗ್ರದೇವತೆ ಉಂಟು ಮಾಡಿದ ಯಾತನೆಯನ್ನು ಸಹಿತ ಶುಕ್ಲದ್ಯಾನಗಳಿಂದ ಘಾತಿ ಅಘಾತಿಕರ್ಮಗಳನ್ನು ಕೆಡಿಸಿ ಮೋಕ್ಷಕ್ಕೆ ಹೋದನು.

ಈ ರೀತಿಯಾಗಿ ವಡ್ಡಾರಾಧನೆಯ ಶ್ರಾವಕನಾದ ವಿದ್ಯುಚ್ಚೋರನಿಂದ ಮಾನವ ಜೀವನದ ಅಶಾಶ್ವತತೆ ಮತ್ತು ಅಶುಚಿತ್ವಗಳ ಬಗ್ಗೆ ಹಲವಾರು ಉದಾಹರಣೆಗಳನ್ನು ಹೇಳುತ್ತಾನೆ. ಕಥೆಯ ಕೊನೆಗೆ ಆರಾಧಕನು ಏರಬೇಕಾದ ಆಧ್ಯಾತ್ಮಿಕ ನಿಚ್ಚಣಿಗಳಾದ ಧರ್ಮಧ್ಯಾನ ಶುಕ್ಲ ಧ್ಯಾನ ವಿವಿಧ ಸ್ತರಗಳನ್ನು ಹೇಳುತ್ತಾನೆ.

ಶೈಕ್ಷಣಿಕ ಪಠ್ಯವಾಗಿ ಈ ನೀತಿ ಕಥೆಯು ವ್ಯಾಕರಣ ಪ್ರಮಾದ, ಛಂದ, ಅಲಂಕಾರ ವಿದ್ಯೆ ಸಂಪಾದಿಸುವುದರೊಂದಿಗೆ, ಕಳ್ಳರನ್ನು ಹಿಡಿಯತಕ್ಕ ಸುರಖವೆಂಬ ವಿದ್ಯೆ, ಕಳುವಿನ ವಿದ್ಯೆಯಾಗಿರುವ ಕರಪಟ ಶಾಸ್ತ್ರಗಳನ್ನು ಆ ಕಾಲದಲ್ಲಿ ಕಲಿಸುತ್ತಿದ್ದರು ಎಂಬುದನ್ನು ತಿಳಿಪಡಿಸುತ್ತದೆ.

**೫.೧೪ ಗುರುದತ್ತ ಭಟಾರರ ಕಥೆ :**

ಇದೊಂದು ಉಪದೇಶಾತ್ಮಕ ಕಥೆಯಾಗಿತ್ತು. ಧಾರ್ಮಿಕ ಮತ್ತು ನೈತಿಕ ತತ್ವಗಳ ಬೋಧೆ ಆಧ್ಯಾತ್ಮಿಕ ಪ್ರವಚನ ಚರ್ಚೆ ಆರಾಧನೆ ಜೈನ ಧರ್ಮದ ಪರಮ ತತ್ವವನ್ನು ಪ್ರತಿಪಾದಿಸುತ್ತದೆ.

ಕುಣಾಳನಾಡಿನ ಸಾವಸ್ತಿ ಎಂಬ ಪಟ್ಟಣವನ್ನು ಉಪರಿಚರನೆಂಬ ಅರಸನು ಆಳುತ್ತಿದ್ದನು. ಅವನಿಗೆ ಪದ್ಮಾವತಿ, ಅಮಿತಪ್ರಭೆ, ಸುಪ್ರಭೆ, ಪ್ರಭಾವತಿಯರಂಬ ನಾಲ್ವರು ಪಟ್ಟದರಸಿಯರು ಮೊದಲಾಗಿ ಐನೂರು ಜನ ಹೆಂತಿಯರು. ಪದ್ಮಾವತಿ ಮಗ ಅನಂತವೀರ್ಯ, ಸುಪ್ರಭೆ ಮಗ ವಜ್ರಪಾಣಿ, ಸುಪ್ರಭೆ ಮಗ ವಜ್ರಬಾಹು. ಪ್ರಭಾವತಿ ಮಗ ವಜ್ರಧರ. ಮಿಕ್ಕ ಅರಸಿಯರ ಒಟ್ಟು ಮಕ್ಕಳು ಸೇರಿ ಐನೂರು ಜನ. ವಸಂತಕಾಲದಲ್ಲಿ ಒಂದು ದಿನ ಅರಸನು ತನ್ನ ನಾಲ್ವರು ಅರಸಿಯರೊಡನೆ ಮತ್ತು ಮಕ್ಕಳೊಡನೆ ವನಕ್ರೀಡೆಯಾಡಿ ಅನಂತರ ಒಂದು ಬೊಡ್ಡಣ ಬಾವಿಯಲ್ಲಿ ಜಲಕ್ರೀಯಾಡಲು ತನ್ನ ನಾಲ್ವರು ಅರಸಿಯರೊಂದಿಗೆ ಬಾವಿಗೆ ಇಳಿದು ವಿಧವಿಧವಾದ ಜೀರ್ಕೋಳವೆಗಳಿಂದ ನೀರು ಹಾಯಿಸುತ್ತ ನೀರು ಚಿಮ್ಮತ್ತ ಸೂಸುತ್ತಾ ಮನಸ್ಸು ಆಹ್ಲಾದಕರಗೊಳಿಸುತ್ತಾ ಜಲಕ್ರೀಡೆ ಯಾಡುತ್ತಿದ್ದನು. ಆಗ ವಜ್ರದಾಡನೆಂಬ ವಿದ್ಯಾಧರನು ಪತ್ನಿಯಾದ ಮದನವೇಗೆಯೊಡನೆ ವಿಮಾನವನ್ನೇರಿ ವಿಹಾರಕ್ಕಾಗಿ ಬರುತ್ತ ಆಕಾಶದಲ್ಲಿ ಹೋಗುತ್ತಿದ್ದರು ಕೆಳಗೆ ಉಪರಿಚರನು ಜಲಕ್ರೀಡೆಯಾಡುತ್ತಿದ್ದದನ್ನು ನೋಡಿದರು. ಆಗ ಮದನ ವೇಗ ನಾವು ಆಕಾಶದಲ್ಲಿ ಹಾರುವುದೊಂದು ಬಿಟ್ಟರೆ ಇಂತಹ ವೈಭವ ಸಂತೋಷವಾಗಲಿ ನಮಗೆ ಇಲ್ಲಿ. ಶ್ರೀಸಂಪತ್ತು ರೂಪು ವೈಭವಗಳಲ್ಲಿ ಉಪಚರಿಸಿ ಮಹಾರಾಜನಿಗಿಂತ ಯಾರು ಇಲ್ಲಿ ಎಂದು ಆತನ ವೈಭವವನ್ನು ಹೋಗಳಿದಳು. ವಜ್ರದಾಡನಿಗೆ ಅದನ್ನು ಕೇಳಿ ಅಸಮಾಧಾನವಾಯಿತು. ತನ್ನ ವಿದ್ಯಾಬಲದಿಂದ ಭಾರೀ ಬಂಡೆಯೊಂದನ್ನು ತಂದು ಜಲಕ್ರೀಡೆಯಾಡುತ್ತಿದ್ದ ಬಾವಿಯ ಬಾಗಿಲಿಗೆ ಅಡ್ಡಲಾಗಿ ಇಟ್ಟು ಹೊರಟು ಹೋದನು. ಎಲ್ಲರು ಸತ್ತರು. ನಾಲ್ವರು ಪಟ್ಟದರಸಿಯರು ನಿರ್ಮೋಹಕಾರಾಗಿ ದೇವರನ್ನು ಧ್ಯಾನಿಸುತ್ತ ರತ್ನತ್ರಯಗಳನ್ನು ಆರಾಧಿಸುತ್ತಾ. ಸತ್ತುದರಿಂದ ದೇವತೆಗಳಾಗಿ ಹುಟ್ಟಿದರು. ಉಪರಿಚರನು ಮಿಥ್ಯಾದೃಷ್ಟಿಯಾದುದರಿಂದ ರಾಜ್ಯ ವೈಭವ ಮೋಹಿಸಿದ ಕಾರಣ ಆರ್ತಧ್ಯಾನದಿಂದ ಸತ್ತ ತನ್ನ ಮನೋಹರವೆಂಬ ಉದ್ಯಾನದಲ್ಲಿ ಹೆಬ್ಬಾವಾಗಿ ಹುಟ್ಟಿದನು.

ಇತ್ತ ಮಾರನೆಯ ದಿನ ರಾಜ - ಪರಿವಾರದವರು ಸೇರಿ ಅರಸನ ಹಿರಿಯ ಮಗ ಅನಂತವೀರ್ಯನಿಗೆ ಪಟ್ಟಕಟ್ಟಿದರು. ಸೌರಸ್ವತಾಚಾರ್ಯರೆಂಬ ಅವಧಿ ಜ್ಞಾನಿಗಳಿಂದ ಧರ್ಮವನ್ನು ಕೇಳಿ ಅನಂತವೀರ್ಯನು ತನ್ನ ತಾಯಾಂದಿರಿಗಾದ ಮರಣವನ್ನು ಪರಿಣಾವನ್ನು ಭಟಾರರಿಂದ ತಿಳಿದುಕೊಂಡನು. ನಿನ್ನ ತಾಯಿಯರು ಶುಭ ಪರಿಣಾಮದಿಂದ ಸತ್ತಿದ್ದರಂದಾಗಿ ಕಾಂತ, ಸುಕಾಂತ, ನಂದ ಸುನಂದ ಎಂಬ ನಾಲ್ವರು ಸಮಾನಿಕ ದೇವರಾಗಿ ಹುಟ್ಟಿದ್ದಾರೆ. ನಿಮಗೂ ನಿಮ್ಮ

ತಂದೆಗೂ ಉಪದೇಶ ಮಾಡಲು ಇಲ್ಲಿಗೆ ಸೇನದಲ್ಲಿ ಬರುತ್ತಾರೆಂದರು. ಭಟಾರರ ಸೂಚನೆಯಂತೆ ಅನಂತವೀರ್ಯನು ತನ್ನ ತಮ್ಮಂದಿರೊಡನೆ ಹೆಬ್ಬಾಲಿನ ಬಳಿಗೆ ಹೋಗಿ ಧರ್ಮೋಪದೇಶ ಮಾಡಲು ಆ ಹೆಬ್ಬಾವು ಜಾತಿಸ್ಮರನಾಗಿ ಉಪದೇಶ ಕೇಳಿತು. ಆ ವೇಳೆಗೆ ನಾಲ್ಕು ದೇವತೆಗಳು ತಾಯಂದಿರ ರೂಪದಲ್ಲಿ ಬಂದು ತಾವೂ ಹೆಂಡಿರಾದರೂ ಜೈನ ಧರ್ಮದಿಂದ ದೇವತೆಗಳಾದವೆಂದು ಹೇಳಿ ನಾವೂ ಹೆಂಗಸರಾದರೂ ಇಷ್ಟು ಶ್ರೀಸಂಪತ್ತು ವೈಭವಗಳನ್ನು ಹೊಂದಿ ತಮ್ಮ ವೈಭವವನ್ನು ಮರೆದರು. ಈ ವೈಭವ ನಮಗೆ ಜಿನಧರ್ಮದ ಪರಮ ಸತ್ವದಿಂದ ಒಂದದಲ್ಲಿ ಎಂದು ಹೇಳಿ ಮಕ್ಕಳಿಗೂ ಹೆಬ್ಬಾಲಿಗೂ ಉಪದೇಶ ಮಾಡಿ ಸ್ವರ್ಗಲೋಕೆಕ್ಕೆ ಹೊರಟು ಹೋದರು. ಧರ್ಮನುರಾಗದಲ್ಲೇ ಇದ್ದರೂ ಹಾವು ಸಾಯುವಾಗ 'ದುರಾತ್ಮನಾದ ವಜ್ರದಾಡನು ನಿಷ್ಕಾರಣವಾಗಿ ನನ್ನನ್ನು ಕೊಂದನು' ಎಂದು ರೋಷದಿಂದಲೇ ಸತ್ತದ್ದರಿಂದ ಭವನವಾಸಿಗ ಲೋಕದಲ್ಲಿ ನೂರಪಳಿತ ಆಯುಷ್ಯವುಳ್ಳ ನಾಗೇಂದ್ರದೇವನಾಗಿ ಹುಟ್ಟಿತು.

ಇತ್ತ ಅನಂತವೀರ್ಯನು ಭಟಾರರ ಧರ್ಮೋಪದೇಶವನ್ನು ಕೇಳಿ ಧರ್ಮದ ಫಲದಿಂದಾಗಿ ತನ್ನ ತಾಯಿಯರು ಪಡೆದ ಸದ್ಗತಿ ರಾಜ್ಯ ವ್ಯಾಮೋಹದಿಂದ ತಂದೆ ಪಡೆದ ದುರ್ಗತಿಯನ್ನು ಪರಿಭಾವಿಸಿ ಸುಬಾಹುವೆಂಟ ಮಗನಿಗೆ ಪಟ್ಟಕಟ್ಟಿ ರಾಜನೀತಿಯನ್ನು ಉಪದೇಶಿಸಿ. ತಪಸ್ಸು ಮಾಡಿ ಮೋಕ್ಷಕ್ಕೆ ಹೋದನು.

ಇತ್ತ ನಾಗೇಂದ್ರನು ಜಿನೇಂದ್ರ ಚೈತ್ಯಾಲಯಗಳನ್ನು ವಂದಿಸಲು ಮಂದರ ಪರ್ವತಕ್ಕೆ ಬಂದಿದ್ದನು. ಅಲ್ಲಿ ವಜ್ರದಾಡನನ್ನು ಕಂಡು ತನ್ನ ಪೂರ್ವ ಜನ್ಮದ ವೈರಿ ಎಂದು ತಿಳಿದು ಆತನನ್ನು ಜರೆದು ಕಳತ್ರ ಸಹಿತ ಸಮುದ್ರ ಪಾತಾಳದ ಹುಡುಕಲು ನೀರಿನಲ್ಲಿ ಅದ್ದಿಕೊಂದನು ನರಕಯಾತನೆ ಅನುಭವಿಸಿದ ವಜ್ರದಾಡನು ನೀಲಗೀರಿ ಎಂಬ ಪರ್ವದಲ್ಲಿ ಹುಲಿಯಾಗಿ ಹುಟ್ಟಿದನು. ಧರಣೇಂದ್ರನು ಆದ ರಾಜನು ಕುರುಜಾಂಗಣ ನಾಡಿನ ಹಸ್ತಿನಾಪುರ ಪಟ್ಟದ ಇಷ್ವಾಕು ವಂಶದ ವಿಜಯದತ್ತ ರಾಜನಿಗೆ ವಿಜಯ ಮತಿಗೆಯರಿಗೆ ಗುರುದತ್ತನೆಂಬ ಮಗನಾಗಿ ಹುಟ್ಟಿದನು. ಎಂಟು ವರ್ಷದವನಾದಾಗ ಕುಮಾರನಿಗೆ ಪಟ್ಟಾಭಿಷೇಕಮಾಡಿ ತಾನು ತಪಸ್ಸಿಗೆ ಹೋದನು. ಗುರುದತ್ತನು ಅಪಾರ ಕೀರ್ತಿಪಡೆದು ರಾಜ್ಯವಾಳುತ್ತಿದ್ದನು.

ಇತ್ತ ನೀಲಗೌರಿ ಪರ್ವತದ ಸುತ್ತ ಮುತ್ತ ಹುಲಿಯ ಉಪದ್ರವವನ್ನು ನಾಡಜನರಿಂದ ಕೇಳಿದ ಅರಸ ಗುರುದತ್ತನು ಹೋಗಿ ಗುಹೆಗೆ ಕಿಚ್ಚಿಕ್ಕಿ ಕೊಂದನು. ಬಳಿಕ ಸತ್ತ ಹುಲಿಯು ದ್ರೋಣಿಮಂತ ಪರ್ವತದ ಸಮೀಪದ ಪಲ್ಲಿಖೇಡವೆಂಬ ಊರಲ್ಲಿ ಹಳಮುಖನೆಂಬ ಬ್ರಾಹ್ಮಣ ಕುಮಾರನಾಗಿ ಜನಿಸಿತು. ಗುರುದತ್ತನು ಅಂಗವೆಂಬ ನಾಡಿನ ಚಂಪಾನಗರವೆಂಬ ಪಟ್ಟಣದರಸನ ಧಾತ್ರಿವಾಹನ ಕುಮಾರಿ ಆಬಯಮತಿಯನ್ನು ವರಿಸಿದನು. ಇಬ್ಬರಿಗೂ ಸುವರ್ಣಭದ್ರನೆಂಬ ಮಗನಾದನು.

ಒಮ್ಮೆ ಹಸ್ತಿನಾಪುರದ ಸಮೀಪದ ಧರಣಿಭೂಷಣವೆಂಬ ಪರ್ವತಕ್ಕೆ ಅಮೃತಾಸ್ರವರೆವೆಂಬ ಗುರುಗಳಿಂದ ಧರ್ಮವನ್ನು ಕೇಳಿ ತಿಳಿದು. ಪೂರ್ವಜನ್ಮದ ವೃತ್ತಾಂತವನ್ನು ಅರಿತು. ಗುರುದತ್ತ – ಅಭಿಯ ಮತಿಯರಿಗೆ ವೈರಾಗ್ಯವುಂಟಾಯಿತು. ಶ್ರೀದತ್ತನೆಂಬ ಹಿರಿಯ ಮಗನಿಗೆ ರಾಜ್ಯಾಭೀಷೆಕಮಾಡಿ ಪಟ್ಟ ಕಟ್ಟಿ ಗುರುಗಳತ್ತ ದೀಕ್ಷೆ ಪಡೆದರು. ಅಭಯಮತಿ ತಪಸ್ಸುಮಾಡಿ ಸಮಾಧಿಮರಣದಿಂದ ಅಮಿತಾಕಾಂತನೆಂಬ ದೇವನಾದಳು ಗುರುದತ್ತ ಭಟಾರರು ಏಕವಿಹಾರಿಯಾಗಿ ಪಲ್ಲೀಖೇಡವೆಂಬ ಊರಿಗೆ ಬಂದಾಗ ಕತ್ತಾಲಾಗಿ ಮಳೆಸುರಿಯುತ್ತಿತ್ತು.

ಮರುದಿನ ಹೆಳಮುಖನೆಂಬ ಬ್ರಾಹ್ಮಣನು ಗದ್ದೆಯುಳಲು ಹೋದಾಗ ಪ್ರತಿಮೆನಿಂದವನನ್ನು ಕಂಡು. ಹಳಮುಖನ ಹೆಂಡತಿ ಗಂಡನಿಗಾಗಿ ಊಟ ತಂದದು ಗಂಡಸರು ಯಾರು ಕಾಣದಕ್ಕಾಗಿ ಮತ್ತು ಮರಳಿ ಮನೆಗೆ ಹೋದಾಗ – ತನಗೆ ಅನ್ನತಾರದಿದ್ದಕ್ಕಾಗಿ ಹೆಂಡತಿಯನ್ನು ಬಡಿದನು. ಆಕೆ ಕಾರಣ ಹೇಳಲು ಹೆಂಡತಿ ಮೇಲಿನ ಕೋಪವನ್ನು ಮುನಿಯ ಮೇಲೆ ತಾಳಿ ಪೂರ್ವಜನ್ಮದ ದ್ವೇಷಕಾರಣವಾಗಿ ಭಟಾರರ ಮೈಗೆ ಹುಲ್ಲಿನ ಹಗ್ಗವನ್ನು ಎಣ್ಣೆಯಲ್ಲಿ ನೆನಸಿ ಕಾಲುಗುರಿನಿಂದ ನೆತ್ತಿಯವರೆಗೆ ಸುತ್ತಿ ಬೆಂಕಿ ಇಟ್ಟನು. ಉರಿ ಏಕಜ್ವಾಲೆಯಾಗಿ ಸುಟ್ಟಿತು. ಆದರೆ ಧ್ಯಾನ ತತ್ಪರರಾಗಿದ್ದ ಭಟಾರರ ಮೈಸುಡಲಿಲ್ಲ. ಇಂದ್ರನ ಆದೇಶದಂತೆ ದೇವತೆಗಳು ಒಂದು ಧರ್ಮವನ್ನು ಕೇಳುತ್ತಿರಲು ಹಳಮುಖನು ಧರ್ಮವನ್ನು ಕೇಳಿ ಭಟಾರರಲ್ಲಿ ಕ್ಷೆಮಕೇಲಿ ಅವನ ಶಿಷ್ಯನಾಗಿ ಋಷಿಯಾದನು.

ಹಳಮುಖ ಋಷಿಯ ಏಕವಿಹಾರಿಯಾಗಿ ಸುತ್ತುತ್ತಿರಲು ರಾತ್ರಿಯಾಗಲು ತುಂಬಭದ್ರನೆಂಬ ಕಾಡುಕಡಿವಾತನು ಸುಡಲಿಕ್ಕೆ ಬಟ್ಟದ ಮರಗಳ ಮೇಲೆ ಯೋಗದಲ್ಲಿರುವ ಕಮ್ಮರಿಗೆ ಬೆಂಕಿ ಇಟ್ಟದರಿಂದ ಹಳೆಮುಖನು ಧ್ಯಾನದಿಂದ ಸತ್ತು ಅಚ್ಯುರೇಂದ್ರನಾಗಿ ಹುಟ್ಟಿದನು. ತುಂಬಭದ್ರ ತಾನು ಋಷಿಯನ್ನು ಕೊಂದುದಕ್ಕಾಗಿ ರೆಚ್ಚನ್ನು ಹೊಕ್ಕು ಸತ್ತ ವ್ಯಂತರದೇವನಾಗಿ ವಿಂದ್ಯಟವಿಯಲ್ಲಿ ದೊಡ್ಡ ಆನೆಯಾದನು. ಅಚ್ಯುತೇಂದ್ರ ಆನೆಗೆ ಧರ್ಮೋಪದೇಶ ಮಾಡಿದನು. ಒಮ್ಮೆ ಕಾಳ್ಗಿಚ್ಚಿಗೆ ಬಲಿಯಾದ ಮೊಲದ ಮೇಲೆ ಕರುಣೆಬೀರಿ ಸತ್ತ ಸಾಮಾನಿಕ ದೇವನಾಗಿ ಹುಟ್ಟಿತು. ಆಮೇಲೆ ರಾಜಗ್ರಹದ ಶ್ರೀಣಕ ರಾಜನ ಹೆಂಡತಿ ಧನಶ್ರೀ ಗರ್ಭದಲ್ಲಿ ಒಂದು ಗಜಕುಮಾರನಾಗಿ ಹುಟ್ಟಿದನು. ಗಜಕುಮಾರನು ವರ್ಧಮಾನ ಭಟಾರರಲ್ಲಿ ದೀಕ್ಷೆ ಪಡೆದು. ಸಂಚಾರಿಸುತ್ತಾ ಕಳಿಂಗದ ದಂತಿಪುರದ ಷಡವಣ ಬೆಟ್ಟದ ಮೇಲೆ ಪ್ರತಿಮಾಯೋಗದಲ್ಲಿದ್ದನು.

ಆ ಪಟ್ಟಣದ ರಾಜನರಸಿಂಹನು ತನ್ನ ಮಂತ್ರಿ ಬುದ್ಧದಾಸನಿಗೆ ಬೇಸಿಗೆಯಲ್ಲಿ ಆ ಋಷಿಅಲ್ಲಿ ನೆಲಸಲು ಕಾರಣ ಕೇಳಿದಾಗ ಆ ತಪಸ್ಸಿಗೆ ಮಹಾವಾತ ರೋಗವಿದೆ. ಅದಕ್ಕೆ ಔಷಧಿ ಎಂದರೆ ಆ ತಪಸ್ಸಿಗೆ ಎರಿದ ಶಲೆಯನ್ನು ಕಾಯಿಸುವುದು ಎಮದನು. ರಾಜಾಜ್ಞೆಯಂತೆ ಮಂತ್ರಿ ಅಲ್ಲಿಗೆ ಹೋಗಿ ಶತಿಯನ್ನು ಕೆಮಡದಂತೆ ಕಾಸಿದನು. ಚರಿಗೆ ಹೋಗಿ ಬಂದ ಋಷಯ ತನಗೆ

ಇಷ್ಟೇ ಆಯುಷ್ಯವೆಂದು ಯೋಗವೇಶವೇರಿ ಮೋಕ್ಷಕ್ಕೆ ಹೋದರು. ಬುದ್ಧದಾಸನು ಮುಂದೆ ಶ್ರಾವಕಧರ್ಮವನ್ನು ಸ್ವೀಕರಿಸಿದನು ನರಸಿಂಹರಾಜರ ಪಾಪ ಪರಿಹಾರಕ್ಕಾಗಿ ಸುಧರ್ಮರಲ್ಲಿ ದೀಕ್ಷೆ ಪಡೆದು ಸತ್ತು ಅಹಮಿಂದ್ರ ದೇವನಾದನು.

ಈ ರೀತಿಯಾಗಿ ಈ ಕಥೆಯು ಜಿನಧರ್ಮದ ಪರಮ ಸತ್ಯ ಅವರ ಪ್ರಭಾವದಿಂದ ಸದ್ಗತಿ. ಮಿಥ್ಯಾತ್ವದಿಂದ ದುರ್ಗತಿ ಹೇಗೆ ಉಂಟಾಗುತ್ತದೆ ಎಂಬುದನ್ನು ತಿಳಿಸುತ್ತದೆ. ಜಿನಾಗಮದಲ್ಲಿ ಸರಿಯಾದ ನಂಬಿಕೆಹೊಂದಿದ ಅರಸಿಯರು ದೇವತೆಗಳಾಗಿ ಹುಟ್ಟುವುದು. ಜೈನ ಸಿದ್ಧಾಂತದ ಪಾಲನೆಯ ಕೃಪೆಯಾಗಿದೆ ಅರಸ ಉಪರಿಚರದು ತಪ್ಪುನಂಬಿಗೆ ಮೋಹದಿಂದ ಆತ್ಮಧ್ಯಾನದಿಂದ ಮರಣ ಹೊಂದಿ ಹೆಬ್ಬಾವಾಗುವುದು. ಆ ಹೆಬ್ಬಾವು ಅರಸುಕುಮಾರ, ನಾಲ್ಕು ದೇವತೆಗಳು ಸಾರಸ್ವತ್ತು ಮುನಿಗಳಿಂದ ಧರ್ಮೋಪದೇಶ ಕೇಳಿ ಶ್ರಾವಕ ವೃತ ಸ್ವೀಕರಿಸುವುದು (ತುಂಗಭದ್ರನ ಆತ್ಮವಾದ) ಭಯಾನಕ ಬಿಳಿ ಆನೆ ಅಚ್ಯುತೇಂದ್ರನ ಪ್ರವಚನಕೇಳಿ ಸಮ್ಯಕ್ ಶ್ರಾವಕ ವೃತ್ತಗಳಿಂದ ಒಣ ಎಲೆ ಶುದ್ಧ ನೀರಿನ ಮೇಲೆ ಜೀವಿಸುವುದು ಆನೆ ಕಾಳ್ಗಚ್ಚಿನಿಂದ ಸುಟ್ಟು ಬಂದಿರುವ ಮೊಲದ ಮೇಲೆ ದಯೆ ತೋರಿಸಿ ದೇವನಾಗಿ ಹುಟ್ಟುವುದು - ಬುದ್ಧದಾಸ ಶ್ರಾವಕ ವೃತದಿಂದ ಪ್ರಗತಿ ಮಾರ್ಗ ಹಿಡಿಯುವುದು. ಅಲ್ಲದೆ ಜೈನಮುನಿಗಳ ಆದರ್ಶಗಳು ಗುರುದತ್ತ ಮುನಿಗಳು, ಹಳೆಮುಖಿ. ಗಜಕುಮಾರ ಮತ್ತು ನರಸಿಂಹ ಇವೆರೆಲ್ಲರೂ ವಿವಿಧ ಉಪಸರ್ಗಗಳನ್ನು ಪರೀಷಹಗಳನ್ನು ಶಾಂತವಾಗಿ ಸಹಿಸಿ ಮರಣಹೊಂದಿ ಸ್ವರ್ಗಸುಖವನ್ನು ಪಡೆಯುವರು ಧರ್ಮಧ್ಯಾನ, ಶುಕ್ಲಧ್ಯಾನಗಳ ನಾಲ್ಕು ಹಂತಗಳು, ನಾಲ್ಕು ಘಾತಿ ಕರ್ಮಗಳ ನಾಶ, ಸಮವಸರಣರ ಪಾರಂಪರಿಕ ವರ್ಣನೆ ನಾಲ್ಕು ಆ ಘಾತಿ ಕರ್ಮಗಳ ನಾಶ ಇತ್ಯಾದಿಗಳು ಕ್ರಮಬದ್ಧವಾಗಿ ಈ ಕಥೆಯಲ್ಲಿ ಚರ್ಚಿಸಲಾಗಿದೆ.

ಶೈಕ್ಷಣಿಕ ಪಠ್ಯವಾಗಿ ಈ ಕತೆಯು ಧಾರ್ಮಿಕ ಮತ್ತು ನೈತಿಕ ತತ್ವಬೋಧನೆಯೊಂದಿಗೆ ಜೈನಧರ್ಮದ ಪರಮ ತತ್ವವನ್ನು ಆಧ್ಯಾತ್ಮಿಕ ಪ್ರವಚನದ ಮೂಲಕ ರತ್ನತ್ರಯ ಆರ್ತಧ್ಯಾನಗಳನ್ನು ಧರ್ಮೋಪದೇಶದ ಮೂಲಕ ಜೈನಮುನಿಗಳ ಅದರ್ಶಗಳನ್ನು ತಿಳಿಯಪಡಿಸುವುದಾಗಿದೆ.

### ೫.೧೫ **ಚಿಲಾತಪುತ್ರನ ಕಥೆ :**

ಈ ಕಥೆಯು "ಶ್ರಾವಕವತ್ರದ ಒಂದಾದ ದಾನದ ಮಹತ್ವ ಜೈನ ಧರ್ಮದ ಕರ್ಮ ಸಿದ್ಧಾಂತವನ್ನು ಪ್ರತಿಪಾದಿಸುತ್ತದೆ".[೫]

ಮಗಧೆ ಎಂಬ ನಾಡಿನ ರಾಜಗ್ರಹವೆಂಬ ಪಟ್ಟಣವನ್ನು ಉಪಶ್ರೇಣಿಕೆಂಬ ಅರಸನು ಆಳುತ್ತಿದ್ದ. ಅವನಿಗೆ ಜಯಾವತಿ, ಮಹಾದೇವಿ ಮೊದಲಾಗಿ ಮೂರು ಸಾವಿರ ಜನ

ಅರಸಿಯರು. ಒಂದು ದಿನ ಉಪಶ್ರೇಣಿಕ ಬೇಟೆಯಾಡಲು ಅಡವಿಗೆ ಹೋದಾಗ ಒಂದು ಹಂದಿಯನ್ನು ಬೆನ್ನಟ್ಟಿದನು. ದುಷ್ಟಾಶ್ವವನ್ನೇರಿ ದಿಕ್ಕುಪಾಲಾಗಿ ಓಡಿ ವಿಂಧ್ಯಾಟವಿಯ ನಟ್ಟನಡುವೆ ಸುರಮ್ಯವೆಂಬ ಬೇಡರ ಹಳ್ಳಿಗೆ ಬಂದಿತು. ಆ ಬೇಡರ ಹಳ್ಳಿಯ ಒಡೆಯ ಮಹಾಕಾಳನು. ಆತನ ಮಗಳು ಗುಣಸುಂದರಿ ಅತ್ಯಂತ ರೂಪ ಲಾವಣ್ಯ, ಸೌಭಾಗ್ಯ ಹಾವ-ಬಾವ ವಿಲಾಸ ವಿಭ್ರಮಗಳಿಂದ ಕೂಡಿದು. ಅನೇಕ ಕನ್ಯೆಯರು ಮತ್ತು ರಕ್ಷಕರೊಂದಿಗೆ ವಟಕ್ರೀಡೆಯಾಡಲೆಂದು ಬಂದು ಅಲ್ಲಿ ಮಲಗಿದ್ದ ಉಪಶ್ರೇಣಿಕ ರಾಜನನ್ನು ಕಂಡು ಮೋಹಿತಳಾದಳು. ಉಪಶ್ರೇಣಿಕನು ಆಕೆಯನ್ನು ಮೋಹಿಸಿ ಅವಳನ್ನು ಮದುವೆಯಾಗಿ ಚಿತಾಲಮಹಾದೇವಿ ಎಂಬ ಹೊಸ ಹೆಸರಿಟ್ಟು ಅವಳೊಂದಿಗೆ ಸುಖವಾಗಿದ್ದನು.

ಅದೇ ನಾಡಿನಲ್ಲಿ ಧನಿಕನಾದ ನಂದಿಮಿತ್ರನೆಂಬ ಸೆಟ್ಟ ಸರಕಿನೊಂದಿಗೆ ವ್ಯಾಪಾರಕ್ಕೆಂದು ಪ್ರಯಾಣಿಸುತ್ತಿರುವಾಗ ಮಧ್ಯ ಒಂದು ಊರಿನಲ್ಲಿ ತಂಗಿದನು ತಪೋವರನೆಂಬ ಋಷಿಗಳು ಏಕವಿಹಾರಿಯಾಗಿ ಸಂಚರಿಸುತ್ತಾ ಬಿಕ್ಷೆಗಾಗಿ ಊರೆಲ್ಲಾ ಎಳ್ಳುಂಡೆಯನ್ನು ಉಣಬಡಿಸಿದನು. ತಪೋವರರು ಅವನನ್ನು ಹರಿಸಿದರು. ನಂದಿಮಿತ್ರನು ಮುಂದಿನ ಜನ್ಮದಲ್ಲಿ ಹೈಮವತ ಭೋಗ ಭೋಮಿಯಲ್ಲಿ ಜನಿಸಿ, ಮತ್ತು ಸತ್ತು. ವ್ಯಂತರದೇವನಾಗಿ ಆಮೇಲೆ ಚಿಲಾತದೇವಿಯ ಗರ್ಭದಲ್ಲಿ ಬಂದು ಹುಟ್ಟಿ. ಚಿಲಾತಪುತ್ರನೆಸಿದನು. ಅವನೇ ಹಿರಿಯಮಗನಾದನು ನಂತರ ಹಿರಿಯ ರಾಣಿ ಜಯಾವತಿಯಲ್ಲಿ ಶ್ರೇಣಿಕನೆಂಬ ಮಗನಾದನು ಮಿಕ್ಕೆಲ್ಲ ರಾಣಿಯರಲ್ಲಿ ಐನೂರು ಮಕ್ಕಳಾದರು. ಅರಸನು ತನ್ನೇಲ್ಲಾ ಮಕ್ಕಳಲ್ಲಿ ಶ್ರೇಣಿಕನ ರಾಜನಾಗಲು ಯೋಗ್ಯವೆಂದರಿತನು. ಆದರೆ ಇತ ತನ್ನಲ್ಲಿದ್ದರೆ ಇತರರು ಅಸೂಹೆ ಪಡುವರೆಂದು ಹೊರನಾಡಿಗೆ ಕಳಸಿದಾಗ ಶ್ರೇಣಿಕ ದಕ್ಷಿಣಮಧರೆಗೆ ಹೋಗಿ ಇಂದ್ರದತ್ತಶೆಟ್ಟನು ಮಗಳು ಅಭಿಯಮತಿಯನ್ನು ವಿವಾಹವಾದನು.

ಇತ್ತ ಉಜ್ಜಯನಿಯ ಅರಸನು ಮಹಾಸಾಮಂತರ ಉಪಶ್ರೇಣಿಕನ ಶತ್ರುವಾದರಿಂದ ಆ ಉಜ್ಜಯಿಸಿ ಮಹಾಸಾಮಂತಕನಾದ ಪ್ರದ್ಯೋತವನ್ನು ಜಿಲಾತಪುತ್ರನು ಸೋಲಿಸಿ ಆತನನ್ನು ಸೆರೆಹಿಡಿದು ಅರಸನಿಗೆ ಒಪ್ಪಿಸಿದಾಗ – ಅರಸನು ಬೇಕಾದನ್ನು ಅಂತಾಃಪುರದ ಹೊರತಾದ ಸ್ತ್ರೀಯರಲ್ಲಿ ಮುಚ್ಚುಮರೆಇಲ್ಲದೆ ಬಾಳಲು ಅನುಮತಿ ಕೊಡಬೇಕೆಂದನು. ರಾಜನು ಹಾಗೆಯೇ ಆಗಲೆಂದನು. ಚಿಲಾತಪುತ್ರನು ಸಾಮಂತ, ಮಹಾಸಾಮಂತ ವರ್ತಕರ ಬ್ರಾಹ್ಮಣರ ಹೆಂಡಿರೊಂದಿಗೆ ಬಲಾತ್ಕಾರದಿಂದ ಬಾಳುತ್ತ ಹನ್ನೆರಡು ವರ್ಷ ಅವಧಿ ಮುಗಿದರು ಹಾಗೆಯೆ ವರ್ತಿಸಿದಾಗ ರಾಜನು ಅವನನ್ನು ಓಡಿಸಿದನು. ಅವನು ಕಾಡಿಗೆ ಹೋಗಿ ಮಹೇಂದ್ರನೆಂಬ ತಪಸ್ವಿ ಇದ್ದ ಕಡೆ ಪಟ್ಟಣ ಕಟ್ಟಿ. ಸುತ್ತಲಿ ಪ್ರದೇಶವನ್ನು ಕೊಳ್ಳೆಹೊಡೆದು ಜೀವಿಸುತ್ತಿದ್ದನು. ಉಪಶ್ರೇಣಿಕ ಶ್ರೇಣಿಕನಿಗೆ ಪಟ್ಟಕಟ್ಟಿ. ಯಮಧರ ಭಟಾರರ ಬಳಿ ಧರ್ಮವನ್ನು ಕೇಳಿ ಶ್ರಾವಕ ವತ್ರಗಳನ್ನು ಸ್ವೀಕರಿಸಿ ಸಮಾಧಿ ಮರಣದಿಂದ ಸತ್ತು ಸ್ವರ್ಗದಲ್ಲಿ ಹುಟ್ಟಿದನು.

ಚಿಲಾತಪುತ್ರನ ಆಳು ಭಟ್ಟ ಮಿತ್ರನೆಂಬುವನು ತನಗೆ ಮಾವನಾದ ರಾಜಗ್ರಹದ ರುದ್ರಮಿತ್ರನು ಮಗಳಾದ ಸುಭದ್ರಯನ್ನು ಕೊಡಲು ಒಪ್ಪದ್ದಕ್ಕಾಗಿ ಆತನು ಬಂದು ಚಿಲಾತಪುತ್ರನಲ್ಲಿ ದೂರು ಇಟ್ಟಾಗ, ಚಿಲಾತಪುತ್ರನು ಐನೂರು ಯೋಧರೊಡನೆ ವಿವಾಹ ಕನ್ನೆಯನ್ನು ಎಳೆತರಲು ಹೇಳಿದನು. ರುದ್ರಮಿತ್ರನು ಶ್ರೇಣಿಗೆ ದೂರು ವಿಟ್ಟನು. ಆಗ ಶ್ರೇಣಿಕನು ಆ ಅನ್ಯಾಯವನ್ನು ಕೊಂಡು ಆ ಹುಡುಗಿಯನ್ನು ಕರೆತರಲು ಆಜ್ಞಾಪಿಸಲು ಸಾಮಂತ ಮಹಾಸಾಮಂತರು. ಮುತ್ತಿಗೆ ಹಾಕಲು ಚಿಲಾತಪುತ್ರನು ಆ ಕನ್ಯೆಯನ್ನು ಕೊಂದು ಬಿಟ್ಟನು. ಆಕೆ ವ್ಯಂತರ ದೇವತೆಯಾದಳು. ಚಿಲಾತಪುತ್ರನು ವೈಭಾರವೆಂಬ ಪರ್ವತಕ್ಕೆ ಹೋಗಿ ಸರ್ವಗುಪ್ತರೆಂಬ ಭಟಾರರಿಂದ ಧರ್ಮವನ್ನು ಕೇಳಿ ಬಾಹ್ಯಾಜ್ಯಂತರ ಪರಿಗ್ರಹಗಳನ್ನು ತೊರೆದು ತಪಸ್ಸುಮಾಡಿ ಕಾಯೋತ್ಸರ್ಗ ಮಾಡಿದರು ಅವನನ್ನು ಶಿಕ್ಷಿಸಲು ಬಂದ ಸೈನಿಕರು ಏನನ್ನು ಮಾಡದೆ ಹಿಂದುರುಗಿದರು. ವ್ಯಂತರ ದೇವತೆಯಾದ ಸುಭದ್ರೆ ಹದ್ದಾಗಿ ಬಂದು ಚಿಲಾತಪುತ್ರನ ತೆಲೆಯ ಮೇಲೆ ಕುಳಿತು ಕಣ್ಣಗಳನ್ನು ತೋಡಿ ತಿಂದಿತು. ಕಟ್ಟಿರುವೆಗಳು ದೇಹವನ್ನೆಲ್ಲಾ ಕಟ್ಟಿ ಸುಲಿದು ಛಿದ್ರ ವಿಧ್ರವಾಗಿ ಮಾಡಿದರು ಎರಡು ದಿನ ಹಗಲು ರಾತ್ರಿ ಈ ದೇವೋಪಸರ್ಗವನ್ನು ಸೈರಿಸಿ ಶುಭಪರಿಣಾಮದಿಮದ ಸತ್ತ ಚಿಲಾತಪುತ್ರಮುನಿ ಸರ್ವಾರ್ಥಸಿದ್ದಿಯಲ್ಲಿ ಅಹಮೀಂದ್ರ ದೇವನಾಗಿ ಹುಟ್ಟಿದನು.

ಸಮ್ಯಕ್ತ ದರ್ಶನದಿಂದ ಎಂಟು ಮದಗಳಿಂದ ಮುಕ್ತಿ, ಅಹಿಂಸೆ, ಅಸ್ತೇಯ, ಬ್ರಹ್ಮಚರ್ಯ, ದುರಾಸೆ, ಮುಂತಾದ ಶ್ರಾವಕ ವ್ರತದ ಮಹತ್ವವನ್ನು ಶೈಕ್ಷಣಿಕ ಪಥ್ಯವಿಷಯವಾಗಿ ತಿಳಿಯಪಡಿಸುತ್ತದೆ.

### ೩.೧೬ ದಂಡಕರಿಸಿಯ ಕಥೆ :

ಈ ಕಥೆಯ ಪ್ರಮುಖವಾಗಿ ಜೈನಧರ್ಮದ ಕರ್ಮಸಿದ್ದಾಂತವನ್ನು ಪ್ರತಿಸುತ್ತಾ ದಾನ ವ್ರತದ ಘನತೆಯನ್ನು ಶ್ರಾವಕರು ಈ ಧಾರ್ಮಿಕ ಆಚರಣೆಯನ್ನು ಅಳವಡಿಸಿಕೊಳ್ಳಲು ಪಚೋದನೆ ನೀಡುವುದಾಗಿದೆ.

ಪೂರ್ವ ವಿದೇಹದ ವೀತಶೋಕವೆಂಬ ಪಟ್ಟಣದಲ್ಲಿ ಅಶೋಕನೆಂಬ ಅರಸನು ಆಳುತ್ತಿದ್ದನು. ಅವನ ಮಹಾಸಾಮಂತರನಾದ ಸುಧಾಮಕನೆಂಬುವನು ತೀವ್ರ ಲೋಭ ಕ್ರೋರಿ ಕರ್ಮದ ಫಲವಾಗಿ ಶಿರೋವೇದನೆ ಮುಖರೋಗಾದಿಗಳು ಉಂಟಾಗಿ ವೇದನೆ ಸಹಿಸಲಾರದರೆ ವೈದ್ಯರನ್ನು ವಿಚಾರಿಸಿದಾಗ ಅವರು ಔಷದಿ ತಯಾರಿಸಿ ಕೊಟ್ಟರು. ಇನ್ನೇನು ಮದ್ದನ್ನು ಅನ್ನದಲ್ಲಿ ಬೇರಸಿ ತಿನ್ನಬೇಕನ್ನುವಷ್ಟರಲ್ಲಿ ಸಮಾಧಿಗುಪ್ತರೆಂಬ ಭಟಾರರ ಭಿಕ್ಷೆಗಾಗಿ ಬಂದರು. ತನಗಿದ್ದ ರೋಗವು ಅವರಿಗೂ ಇರುವುದನ್ನು ಅರಿತು ಸುಧಾಮಕನು ಆ ಔಷಧ ಮಿಶ್ರಿತ ಕೊಳನ್ನು

ಭಕ್ತಿಯಿಂದ ಅವರಿಗೆ ಬಡಿಸಿದನು. ಈ ದಾನದ ಪುಣ್ಯದಿಂದ ಆತನು ಸತ್ತು ನರಕವನ್ನು ಅನುಭವಿಸಿದ ಮೇಲೆ ಅಮಳಕಂಠ ವೆಂಬ ಪಟ್ಟಣಧ ಅರಸು ಅಮಿಷ್ಟ ಸೇನನಿಗೆ ಹೆಂಡತಿ ನಂದಿನಿ ಮಹಾದೇವಿಗೆ ಗರ್ಭಿಣಿಯಾಗಿದ್ದಾಗ ಎಲ್ಲರನ್ನು ದಂಡಿಸುವ ಬಯಕೆವುಂಟಾಗಿರುವುದರಿಂದ ಆಕೆಯ ಗರ್ಭದಲ್ಲಿ ಬಂದು ದಂಡಕನೆಂಬ ಮಗನಾಗಿ ಜನಿಸಿದನು. ನಂದಿನಿಗೆ ನಂದವತಿ ಎಂಬ ಮಗಳಿದ್ದಳು ಅವಳಿಗೆ ಅರ್ಧಚಕ್ರವರ್ತಿಯಾದ ವಿಷ್ಣುವಿಗೆ ಕೊಟ್ಟು ಮದುವೆ ಮಾಡಿಕೊಟ್ಟಿದ್ದರು. ದಂಡಕನು ವಿಷ್ಣುವಿನ ತುಂಬ ಪ್ರೀತಿ ಪ್ರಾಯವಾದ ಸೇನಾಪತಿಯಾಗಿದ್ದನು.

ಒಮ್ಮೆ ವಿಷ್ಣು ಅರಿಷ್ಟನೇಮಿ ಭಟಾರರನ್ನು ವಂದಿಸಲೆಂದು ಸಮವಸರಣ ಮಂಟಪಕ್ಕೆ ಹೋಗಿದ್ದಾಗ ಧರ್ಮೋಪದೇಶಿ ಕೇಳಿ ದಂಡಕನ ಜನ್ಮಾಂತರ ಕಥೆಗಳನ್ನು ಅವರಿಂದ ಕೇಳಿ ತಿಳಿದರು. ದಂಡಕನು ತನ್ನ ಪೂರ್ವ ವೃತ್ತಾಂತವನ್ನು ಅರಿತುಕೊಂಡು ವೈರಾಗ್ಯ ಪರವಾಗಿ ತಪಸ್ಸು ಆಚರಿಸಿ ಭಿಕ್ಷೆ ಹೋದಾಗ ಯಾರು ಭಿಕ್ಷೆ ನೀಡಲಿಲ್ಲ. ಸಂಚರಿಸುತ್ತಾ ದ್ವಾರಾವತಿಗೆ ಬಂದನು. ವಿಷ್ಣು ಅವನಿಗೆ ಚಿಕಿತ್ಸೆ ಮಾಡಿಸಲು ರಾಜ ವೈದ್ಯನಾದ ಜಯನಿಂದ ದಿವ್ಯ ಔಷಧಿಗಳ ಉಂಡೆಗಳನ್ನು ಹಿಟ್ಟಿನ ಮೂಲಕ ಪ್ರಯೋಗಿಸಿ ಸಾವಿರ ಅರಸಿಯ ಮನೆಯ ಆಹಾರಗಳಿಂದಲೂ ರಿಸಿಯ ದೇಹಕ್ಕೆ ಆಹಾರ ದೊರೆಯುವಂತೆ ಮಾಡಿದನು. ನಾಲ್ಕು ತಿಂಗಳಲ್ಲಿ ರೋಗ ಗುಣಮುಖವಾಯಿತು. ಚಿಕಿತ್ಸೆಮಾಡಿದ ವೈದ್ಯ ಜಯನು ತನಗೆ ಭಟಾರರು ಹೊಗಳಲಲ್ಲಿವೆಂದು ಸತ್ತು ನರ್ಮದಾ ತೀರದಲ್ಲಿ ಕೋಡಗನಾಗಿ ಹುಟ್ಟಿದನು. ದಂಡಕ ಋಷಿಗಳ ಸಿಂಹನಿಷ್ಕ್ರೀಡಿತ ಎಂಬ ವ್ರತ ಕೈಗೊಂಡು ನರ್ಮದೆನು ತೀರದಲ್ಲಿ ಮಾವಿನ ಮರದ ಕೆಳಗೆಕುಳಿತು ಸಾಧ್ಯಾಯದಲ್ಲಿ ತೊಡಗಿದ್ದಾಗ ಕೋಡಗನು ಅವರನ್ನು ನೋಡಿ ಪೂರ್ವಜನ್ಮದ ವೈರದಿಂದ ಸಿಟ್ಟಿನಿಂದ ಮಾವಿನ ಮರದ ಕೊಂಬೆಯನ್ನು ಮುರಿದಿಕ್ಕಿ ಋಷಿಯ ತೊಡೆಮುರಿದನು. ಆದರೆ ಋಷಿಯ ವೇದನೆಯನ್ನು ಸಮಭಾವದಿಂದ ಸಹಿಸಿದನು ಕೋಡಗಕ್ಕೆ ಪಶ್ಚಾತ್ತಾಪವಾಗಿ ಆ ಗಾಯಕ್ಕೆ ಮದ್ದುಹಾಕಿ ಋಷಿಯ ಪಾದದ ಮೇಲೆ ಬಿದ್ದು ಹೊರಳಿತು. ಋಷಿ ಅದಕ್ಕೆ ಧರ್ಮೋಪದೇಶ ಮಾಡಿ ವ್ರತಗಳನ್ನು ಕೈಗೊಳ್ಳಲು ಹೇಳಿದರು ಅದು ದೇಹವನ್ನು ದಂಡಿಸಿ ಸತ್ತು ಸನತ್ಕುಮಾರ ಕಲ್ಪದಲ್ಲಿ ಸಮಾನಿಕ ದೇವನಾಗಿ ಬಂದು ತನ್ನ ಈ ದೇವತ್ವವನ್ನು ವೈಭವವನ್ನು ಪಶುಜಾತಿಯಾದ ನನಗೆ ದಯ ಪಾಲಿಸಿದ್ದಿರಿ ಎಂದು ವಂದಿಸಿ ತೆರಳಿತು. ಅಂದಿನಿಂದ ಆ ಕ್ಷೇತ್ರವು ಅಮರೇಶ್ವರ ಕ್ಷೇತ್ರವೆಂದು ಐತಿಹಾಸಿಕವಾಗಿ ಪ್ರಸಿದ್ಧಿ ಆಯಿತು.

ಇತ್ತ ದಂಡಕರಿಸಿ ಸಂಚಾರ ಮಾಡುತ್ತ ಉತ್ತರ ಮಧುರೆಗೆ ಬಂದು ಸೂರ್ಯಪ್ರತಿಮಾಯೋಗದಲ್ಲಿ ನಿಂತನು ಆ ಪಟ್ಟಣದ ಅರಸ ಯಮಬಾಂಕನೆಂಬುವನು ಹಿಂದೆ ತಾನು ದಂಡಕನಿಂದ ಬಹಳವಾಗಿ ಶಿಕ್ಷೆ ಅನುಭವಿಸಿದ್ದರಿಂದ ಪೂರ್ವ ವೈರದಿಂದ ಕೆಂಪಗೆ ಕಾಯಿಸಿದ ಹರಿತವಾದ ಅಲಿಗುಗಳಿರುವ ಬಾಣಗಳಿಂದ ಮೈಗೆ ಹೊಡೆದನು ರಿಸಿ ಇದನ್ನೆಲ್ಲಾ ಸಹಿಸಿ ಶುಕ್ಲ ಧ್ಯಾನಗಳನ್ನು ಧ್ಯಾನಿಸಿ ಕರ್ಮಕ್ಷಯಕಳೆದು ಮೋಕ್ಷ ಪಡೆದರು. ಇದನ್ನು ಕಂಡ

ಯಮುನಾವಂಕನು ವೈರಾಗ್ಯತಾಳಿ ತಪಸ್ಸು ಮಾಡಿ ಶುಕ್ಲಧ್ಯಾನದಲ್ಲೇನಿರತನಾಗಿ ಘಾತಿ ಕರ್ಮಗಳನ್ನು ಕೆಡಿಸಿ ಮೋಕ್ಷ ಪಡೆದನು.

ಶೈಕ್ಷಣಿಕ ಚಿಂತನೆಯಲ್ಲಿ ಜೈನ ಧರ್ಮದ ಕರ್ಮ ಸಿದ್ಧಾಂತವನ್ನು ಅನೇಕ ಪಾತ್ರಗಳ ಮೂಲಕ ತಿಳಿಸಿ ಆರಿಷ್ಟ ನೇಮಿಯ ಧರ್ಮೋಪದೇಶದವನ್ನು ಪಠ್ಯಗಳ ಮೂಲಕ ಧರ್ಮದ ವಿಚಾರವನ್ನು ಒಳಗೊಂಡಿದೆ.

### ೩.೧೭ ಮಹೇಂದ್ರದತ್ತಾಚಾರ್ಯರ್ ಮೊದಲಾದ ಐನೂರ್ವರ್ ಋಷಿಗಳ ಕಥೆ :

ಈ ಕಥೆಯು ಕರ್ಮಪ್ರತಿಫಲ ಸಿದ್ದಾಂತವನ್ನು ಮತ್ತು ತೇಜೋಬುದ್ಧಿಯನ್ನು ಪಡೆಯುವ ಮುನಿಯ ವಿರಾಧನೆಯನ್ನು (ರತ್ನತ್ರಯಗಳನ್ನು) ಕಳೆದು ಕೊಂಡಿರುವುದನ್ನು ವಿವೇಚಿಸುತ್ತದೆ ಋಷಿಯೋರ್ವನು ವಾದದಲ್ಲಿ ತನ್ನನ್ನು ಸೋಲಿಸಿರುವ ಕಾರಣವಾಗಿ ಆ ದ್ವೇಷದಿಮದ ಒಬ್ಬಮಂತ್ರಿ ಐನೂರು ಋಷಿಗಳನ್ನು ಎಳ್ಳಿನಗಾಣದಲ್ಲಿ ಹಿಂಡಿ ಕೊಂದ ಘಟನೆ ಈ ಕಥೆ ಒಳಗೊಂಡಿದ್ದು. ಸ್ಕಂದಕುಮಾರನು ತಾನು ಮಾಡಿದ ನರಹತ್ಯೆಯಿಂದಾಗಿ ಏಳನೆ ನಗರಕ್ಕೆ ಬಿದ್ದು ಏಳು ನರಕ, ಏಳು ಲೋಕಜನ್ಮಗಳಲ್ಲಿ ಜನ್ಮ ತಾಳಿ ಜೈನಧರ್ಮದ ಸಂಸ್ಕಾರದಿಂದ ಕೊನೆಗೆ ಸದ್ಗತಿಯನ್ನು ಪಡೆಯುತ್ತಾನೆ.

ವಿದೇಹವೆಂಬ ನಾಡಿನಲ್ಲಿ ಸಾವಸ್ತಿ ಎಂಬ ಪಟ್ಟಣ ಅದನ್ನು ಜಿತಶತ್ರು ಎಂಬ ಅರಸನು ಆಳುತ್ತಿದ್ದನು. ಧಾರಣಿ ಎಂಬುವಳು ಅವನ ಹೆಂಡತಿ ಇಬ್ಬರಿಗೂ ಸ್ಕಂದಕುಮಾರ ಎಂಬುವನು. ಸ್ಕಂದಕುಮಾರನ ತಂಗಿ ಪುಂಡ್ರಯಶೆ ಎಂಬುವಳನ್ನು ದಕ್ಷಿಣಾ ಪಥದ ಕುಂಭಕಾರ ಘಟವೆಂಬ ಪಟ್ಟಣದ ದಂಡಕನೆಂಬ ಅರಸನಿಗೆ ಕೊಟ್ಟು ಮದುವೆ ಮಾಡಲಾಗಿತ್ತು.

ಹೀಗಿರಲು ಒಮ್ಮೆ ಮುನಿಸುವ್ರತ ತೀರ್ಥಂಕರ ಬಳಿಗೆ ಮಹೇಂದ್ರದತ್ತನೂ ಜಿನಶತ್ರುವಿನ ಕುಮಾರ ಸ್ಕಂದಕುಮಾರನು ಈ ಮೊದಲಾದ ಐನೂರು ರಾಜಪುತ್ರರು ಎಲ್ಲಾ ಓದನ್ನು ಕಲಿತು ತಪಸ್ವಿಗಳಾದರು. ಅಭಿನಂದನರೆಂಬ ಗಣಧರರೊಂದಿಗೆ ಸಂಚರಿಸುತ್ತಾ ಕಳಿಂಗ ದೇಶದ ದಂತಪುರ ಪಟ್ಟಣಕ್ಕೆ ಬಂದರು. ಈ ದಂತಪುರ ಪಟ್ಟಣವನ್ನು ಜನಾರ್ಥ ಮಹಾರಾಜ ಆಳುತ್ತಿದ್ದು ಇವನ ರಾಜಪುರೋಹಿತ ವ್ಯಾಳನೆಂಬುವನು. ಅರಸನ ಮುಂದೆ ವಿದ್ವದ್ಗೋಷ್ಠಿಯಲ್ಲಿ ವಾದದಲ್ಲಿ ಸ್ಕಂದಕುಮಾರನೊಂದಿಗೆ ವ್ಯಾಳನ ಸೋತನು ಈ ಕಾರಣವಾಗಿ ಅರಸನು ವ್ಯಾಳನನ್ನು ಓಡಿಸಿದನು. ಆ ವ್ಯಾನು ದಂಡಕನೆಂಬ ಅರಸನ ಬಳಿ ಮಂತ್ರಿಯಾಗಿ ಕೆಲಸಕಾರ್ಯ ಮಾಡತೊಡಗಿದನು.

ಋಷಿ ಸಮೂಹವು ಸಂಚಾರವನ್ನು ಮಾಡುತ್ತ ಮುಂದುವರೆಸಿ ಕುಂಬಕಾರಘಟ ಪಟ್ಟಣಕ್ಕೆ ಬಂದಿದ್ದರಿಂದ ಆ ಪಟ್ಟಣ ಅರಸ ದಂಡಕ ಜಿನಭಕ್ತ ನಾಗಿರುವುದರಿಂದ. ಅವರನಲ್ಲ

ಸತ್ಕರಿಸಿ ಅಭಿನಂದಿಸಿ ಭಟಾರರ ಬಳಿ ಧರ್ಮವನ್ನು ಕೇಳಿ ಶ್ರಾವಕ ವತ್ರ ಕೈಗೊಂಡು. ಪ್ರತಿದಿನವೂ ಭಿಕ್ಷೆಗೆ ಆಹ್ವಾನಿಸಿ ಐನೂರು ರಿಸಿಯರನ್ನು ಸೇವಿಸುತ್ತಿದ್ದನು. ಹೀಗಿರಲು ವ್ಯಾಳನು ಪೂರ್ವದ್ವೇಷದಿಂದಾಗಿ ಅವರನ್ನು ಅಟ್ಟ ಕಳಿಸಬೇಕೆಂದು ಉಪಾಯ ಮಾಡತೊಡಗಿದನು. ಒಂದು ದಿನ ಅಡವಿಗೆ ಹೋದಾಗ ಅವರು ಮತ್ತೆ ಹಿಂದಿರುಗಿದ ಅವರು ಓದುವ ಸ್ಥಳದಲ್ಲಿ ಗಿಡದ ಕೆಳಗೆ ಆಯುಧಗಳನ್ನು ಹೋತಿಟ್ಟು. ಬಂದ ಅರಸರಿಗೆ ಈ ರೀತಿ ಹೇಳಿದನು ಇವರು ನಿಜವಾಗಿಯೂ ಶಕ್ತಿ ಶಾಲಿಗಳು ಇವರು ನಿಮ್ಮ ಪ್ರಾಣಕ್ಕೆ ಅಪಾಯವುಂಟು ಮಾಡುವರೆಂದರು ರಾಜ ಈ ಮಾತನ್ನು ಅಲಕ್ಷಿಸಿದನು. ಮತ್ತೆ ಕೆಲವು ದಿನಗಳ ನಂತರ ರಾಜನ ಭಂಡಾರಕ್ಕೆ ಕನ್ನ ಹಾಕಿಸಿ ಆಭರಣಗಳನ್ನು ಬಸದಿಯ ಕೋಣೆಯಲ್ಲಿಟ್ಟ ಋಷಿಗಳು ಕಳ್ಳರೆಂಬ ಆರೋಪವನ್ನು ಹೊರಸಿದನು. ಈ ಸಂದರ್ಭವನ್ನು ಅರಸನು ಕಡೆಗಣಿಸಿದನು. ಕೆಲವು ದಿನಗಳ ನಂತರ ವ್ಯಾಳನು ಸುವ್ರತೆ ಎಂಬ ರಾಣಿಯೊಂದಿಗೆ ಕೊಡಿಕೊಂಡು ಒಬ್ಬನಿಗೆ ಬೇಕಾದಷ್ಟು ಹಣಕೊಟ್ಟು ಸನ್ಯಾಸಿಯಂತೆ ಮಾಡಿ ಅರಸಿಯ ಮಂಚವೇರುವಂತೆ ಮಾಡಿ 'ನಮಾಸ್ತು'ಎಂದು ನಟಿಸುವಂತೆ ಹೇಳಿ ಕಳಿಸಿದಾಗ. ಅರಸನಿಗೆ ಈ ಸನ್ನಿವೇಶವನ್ನು ತೋರಿಸಿದನು ಇದುವರೆಗೆ ನಂಬದಿದ್ದ ಅರಸನು ಹಿಂದಿನ ತಪ್ಪುಗಳನ್ನು ಈ ರಿಸಿಗಳೇ ಮಾಡಿದ್ದಾರೆಂಬ ನಂಬಿಕೆವುಂಟಾಗಿ. ಅವರ ಮೇಲೆ ಕ್ರೋಧ ಉಂಟಾಗಿ. ಇವರಿಗೆ ನೀನೆ ತಕ್ಕ ಶಿಕ್ಷೆ ವಿಧಿಸಬೇಕೆಂದು ಆಜ್ಞೆಮಾಡಿದಾಗ. ವ್ಯಾಳನು ಐನೂರು ಋಷಿಗಳನ್ನು ಎಳ್ಳಿನ ಗಾಣದಲ್ಲಿ ಹಿಂಡಿ ಕೊಂದನು. ಆದರೆ ಅವರಲ್ಲಿರೂ ಶುಕ್ಲದ್ಯಾನ ಮಾಡುತ್ತಾ ಸತ್ತ ಸ್ವರ್ಗಪಡೆದರು.

ಇತ್ತ ಸ್ಕಂದಕುಮಾರನು ರಿಸಿಗಳೂ ನಿರಪರಾಧಿಗಳೆಂದು ಅರಿತು ಈ ಪಾಪಿಯಾದ ವ್ಯಾಳದೇ ಕೊಂದನೆಂದು ಕೋಪಗೊಂಡು ವ್ಯಾಳಮಂತ್ರ ಮೊದಲಾದ ಪಟ್ಟಣಿಗರನ್ನು ಜೀವರಾಶಿಯನ್ನು ಸುಟ್ಟು ತನ್ನನ್ನು ತಾನು ಸುಟ್ಟಿಕೊಂಡನು. ಸ್ಕಂದಕುಮಾರ ತಾನು ಮಾಡಿದ ನರಹತ್ಯೆಗೆ ಕಾರಣನಾಗಿ ಏಳನೆಯ ನರಕಕ್ಕೆ ಹೋಗುತ್ತಾನೆ. ದಂಡಕನು ಸಹಿತ ಏಳು ನರಕ ಮತ್ತು ಏಳು ಲೋಕ ಜನ್ಮಗಳನ್ನು ಹೊಂದಿ ರಾಮದೇವರ ಸಂಸರ್ಗದಿಂದ ಜಿನಧರ್ಮವನ್ನು ಕೇಳಿ ಅದನ್ನೆಲ್ಲವನ್ನು ಅನುಸರಿಸಿ ಪಂಚನಮಸ್ಕಾರ ಮಾಡುತ್ತಾ ಸತ್ತು ಸ್ವರ್ಗದಲ್ಲಿ ಹುಟ್ಟಿದನು.

ಈ ರೀತಿಯಾಗಿ ಈ ಕಥೆಯು ಅರಸ ದಂಡಕನ ನರಕದಲ್ಲಿಯ ವಿವಿಧ ಗತಿಗಳಲ್ಲಿಯ ವರ್ಣನೆ ಈ ವರ್ಣನೆಯು ಕರ್ಮಪ್ರತಿಫಲದ ಸಿದ್ಧಾಂತವನ್ನು ವಿವೇಚಿಸಿ ಕಥೆಯ ಕೊನೆಗೆ ದಂಡಕ ಜಟಾಯು ಪಕ್ಷಿಯಾಗಿ ಹುಟ್ಟಿ ರಾಮನ ಸಂಪರ್ಗದಿಂದ ಜೈನ ಧರ್ಮ ಸ್ವೀಕರಿಸಿ ಪಂಚನಮಸ್ಕಾರ ಮಂತ್ರವನ್ನು ಜಪಿಸುತ್ತಾ ಮರಣಹೊಂದಿ ಸ್ವರ್ಗದಲ್ಲಿ ಹುಟ್ಟಿದನು. ಈ ರೀತಿಯಾಗಿ ಈ ಕತೆಯು ಜೈನಧರ್ಮದ ಮಾಹಿತಿಯನ್ನು ಪ್ರತಿಪಾದಿಸುತ್ತೇವೆ.

ಧರ್ಮದ ಉಪದೇಶವಾಗಿ ನರಕಗಳಲ್ಲಿ ವಿವಿಧ ಗತಿಗಳನ್ನು ಕರ್ಮದ ಪ್ರತಿಫಲವಾಗಿ ಧರ್ಮದ ಸ್ವೀಕಾರದಿಂದ ಮುಕ್ತಿಯ ಮಾರ್ಗವನ್ನು ಶೈಕ್ಷಣಿಕ ಪಠ್ಯವಾಗಿ ತಿಳಿಯಪಡಿಸುತ್ತದೆ.

### ೫.೧೮ ಚಾಣಾಕ್ಯರಿಸಿಯ ಕಥೆ:

ಈ ಕಥೆಯು "ರಾಜನೀತಿಯನ್ನು ಅದರ ಮಹತ್ವವನ್ನು ಐತಿಹಾಸಿಕ ಮಹತ್ವವುಳ್ಳದಾಗಿದೆ. ಅಲ್ಲದೆ ಕಥೆಯ ಬಹುಪಾಲು ಭಾಗವು ಅಜೈನ ಹಿನ್ನಲೆ, ಉಪಕಥೆ ಮತ್ತು ಘಟನೆಗಳನ್ನು ಒಳಗೊಂಡಿದೆ".[೬]

ಮಗದೆ ಎಂಬ ನಾಡು ಅಲ್ಲಿ ಪಾಟಲೀಪುತ್ರಂಬ ಪಟ್ಟಣವನ್ನು ನಂದವಂಶದ ಪದ್ಮನೆಂಬ ಅರಸನು ಅವನ ಹೆಂಡತಿ ಸುಂದರಿ, ಮಗ ಮಹಾಪದ್ಮ, ಮಂತ್ರಿ ಕಾಪಿ. ಈ ಕಾಪಿಗೆ ವಿಶ್ವಸೇನನೆಂತಲೂ ಹೆಸರಿತ್ತು, ಮಂತ್ರಿ ಕಾಪಿಯು ರಾಣಿ ಸುಂದರಿಯಲ್ಲಿ ಮೋಹಿತನಾಗಿದ್ದನು. ಕಾರಣ ಅರಸನನ್ನು ಕೊಂದು ರಾಣಿಯೊಂದಿಗೆ ಬಾಳುತ್ತೇವೆಂದು ಆಲೋಚಿಸಿ 'ಅರಸರನ್ನು ಕುರಿತು ದೇವಾ ನಿಮ್ಮಲ್ಲಿರುವ ಅಮೂಲ್ಯವಾದ ಸಂಪತ್ತನ್ನು ಯಾರಿಗೂ ತಿಳಿಯದಂತೆ ಬಚ್ಚಿಟ್ಟು ಶತ್ರುಗಳನ್ನು ಎದುರಿಸಿ ಯುದ್ಧ ಮಾಡೋಣ' ಎಂದು ನಂಬಿಸಿ, ಮೋಸಮಾಡಿ ಕೆಸರಿನ ಬಾವಿಗೆ ಕರೆತಂದು ನೂಕಿ ಇರಿದು ಕೊಂದನು. ಮರದ ಮೇಲೆ ಹೂ ಬಿಡಿಸುತ್ತಿದ್ದ ವಸಂತಕ ನೆಂಬ ಮಾಲೆಗಾರನು ಕಂಡನು ಮರುದಿನ ಅರಮನೆಗೆ ಹೋಗಿ ಕೃತಕ ದುಃಖವನ್ನು ಪ್ರದರ್ಶಿಸುತ್ತಾ ಕೆಲವು ದಿನಗಳ ವರೆಗೆ ಅತೀವ ದುಃಖ ವ್ಯಕ್ತಪಡಿಸಿ. ಅರಸುಕುಮಾರ ಮಹಾಪದ್ಮನಿಗೆ ಪಟ್ಟಕಟ್ಟಿ. ತಾನು ಸುಂದರಿಯೊಂದಿಗೆ ಕಳ್ಳತನದಿಂದ ಬಾಳತೊಡಗಿದನು ಪದ್ಮರಾಜನ ಕೊಲೆಯ ಸುದ್ದಿಯನ್ನು ವಸಂತಕನೆಂಬ ಮಾಲೆಗಾರನಿಂದ ಮಹಾಪದ್ಮನಿಗೆ ಸಂಗತಿ ತಿಳಿಯಿತು. ಕಾರಣ ಮಂತ್ರಿಯಾದ ಕಾಪಿ ಹಾಗೂ ಅವನ ಹೆಂಡತಿ ಮಕ್ಕಳೊಡನೆ ನೆಲಮಾಳಿಗೆಯಲ್ಲಿ ಬಂಧನದಲ್ಲಿಟ್ಟಾಗ. ಕಾಪಿಯ ಮಕ್ಕಳಲ್ಲಿ ಸಂಬಂಧು ಹೊರತು ಎಲ್ಲರೂ ಸತ್ತರೂ. ಕಾರಣ ಸುಬಂಧುವಿಗೆ ಮಂತ್ರಿ ಪದವಿ ದೊರೆಯಿತು. ಸುಬಂಧು ಮಹಾಪದ್ಮನ ಎರಡನೇ ಮಂತ್ರಿ ಶಕಟಾಳ ಅವನ ಮಗಳಾದ ನಂದಮತಿಯನ್ನು ಮದುವೆಯಾದನು.

ಇತ್ತ ಮಗದೆ ಎಂಬ ನಾಡಿನಲ್ಲಿ ಶಾಲ್ಮಲಿ ಎಂಬ ಅಗ್ರಹಾರದಲ್ಲಿ ಸೋಮಶರ್ಮನೆಂಬ ಬ್ರಾಹ್ಮಣನಿಗೆ ಕಪಿಳೆ ಎಂಬ ಹೆಂಡತಿ. ಇವರಿಗೆ ನಾಲ್ಕು ದಾಡೆಯುಳ್ಳ ಮಗನು ಹುಟ್ಟಿದನು. ಅವನಿಗೆ ಚಾಣಾಕ್ಯನೆಂದು ಹೆಸರಿಟ್ಟರು. ಈ ನಾಲ್ಕು ದಾಡೆಗಳಿಂದ ಹುಟ್ಟಿದವನಿಂದ ನಂದವಂಶಕ್ಷಯವಾಗುತ್ತದೆಂದು ನೈಮಿತ್ಯಕನು ಭವಿಷ್ಯ ನುಡಿದನು. ಚಾಣಾಕ್ಯನು ಬೆಳೆದು ವೇದಾದಿ ವಿದ್ಯೆಗಳನ್ನು ಕಲಿತ ಋಷಿಗಳಿಂದ ಧರ್ಮಕೇಳಿ ಶ್ರಾವಕ ವ್ರತ ಕೈಗೊಂಡು ಪಾಟಲಿಪುತ್ರಕ್ಕೆ ಬಂದನು ಪಾಂಡಿತ್ಯ ಕಂಡು ಶಾಕಟಾಯನು ತನ್ನ ಮಗಳು ಯಶೋಮತಿಗೆ ಕೊಟ್ಟು ಮದುವೆಮಾಡಿವುದು. ಒಂದು ದಿನ ಶೋಣಾನದಿಯ ತೀರದಲ್ಲಿ ಚಾಣಾಕ್ಯನ ಕಾಲಿಗೆ ಒಂದು ದರ್ಭೆಯ ಕುಡಿ ಚುಚ್ಚಿ ರಕ್ತ ಬಂದಿತು. ಅದನ್ನು ತೆಗೆದು ಸುಡುವುದನ್ನು ಸುಬಂದುನೋಡಿ. ಆತನ ಬುದ್ಧಿಮಹತ್ವನ್ನು ಕಂಡನು. ಕಾರಣ ಸಮಾರಂಭವೊಂದರಲ್ಲಿ ದಿವ್ಯ ಆಹಾರವನ್ನಿಟ್ಟು ಚಾಣಾಕ್ಯ ಆತನ ಮಡದಿಗೆ ಬರಿ ಗಂಜಿಯನ್ನು ಮಡದಿ ನಂದಮತಿಯ ಕೈಯಲ್ಲಿ

ಕೊಟ್ಟು ಕಳಿಸಿದನು ಚಾಣಾಕ್ಯನು ಅರಸನನ್ನು ಶ್ಲೋಕಗಳಿಂದ ಸುತ್ತಿಸಿ ಅಗ್ರಹಾರ ಪದವಿಯನ್ನು ಪಡೆದುಕೊಂಡು. ಸುಬಂದು ಪೂರ್ವ ವೈರವನ್ನು ನೆನೆದು ನಂದ ವಂಶ ನಿರ್ಮೂಲವನ್ನು ಬಯಸುತ್ತಿದ್ದನು ಕಾರಣ ಮಂತ್ರಿ ಸುಭಂದುವು ತನಗೆ ಅರಸು ಮಹಾಪದ್ಮನ ಆಜ್ಞೆಯನ್ನು ಬಗೆದು ಆಗ್ರಾಸಯದಲ್ಲಿ ಕುಳಿತು ಊಟಮಾಡುತ್ತಿದ್ದ ಚಾಣಾಕ್ಯನನ್ನು ಎಳೆದನು. ಕ್ರೋಧಗೊಂಡು ಚಾಣಾಕ್ಯನು ನಂದನ ಸುಖವನ್ನು ಸುಬಂಧುವಿನ ಬಂಧುವರ್ಗವನ್ನು ನಾಶಮಾಡುತ್ತೇನೆಂದು ಹನ್ನೆರಡು ವರ್ಷದೊಳಗೆ ಮಹಾಪದ್ಮನ್ನು ನಾಶಮಾಡುವುದಗಿ ಪ್ರತಿಜ್ಞೆಮಾಡಿದನು.

ಕಾವಿ ವಸ್ತ್ರಧರಿಸಿ ಸನ್ಯಾಸಿಯ ವೇಷದಲ್ಲಿ ಮಹೋದಕವೆಂಬ ಪಟ್ಟಣಕ್ಕೆ ಬಂದನು. ಆ ಪಟ್ಟಣದ ರಾಜಕುಮದನ ರಾಣಿ ಮಂದೆಗೆ ಗರ್ಭಿಣಿಯಾಗಿದ್ದರಿಂದ ಚಂದ್ರನನ್ನು ನುಂಗುವ ಬಯಕೆ ವುಂಟಾಗಲು. ರಾಣಿ ಮಂದೆಯಲ್ಲಿ ಜನಿಸಿದ ಮಗುವನ್ನು ತನಗೆ ಕೊಟ್ಟದ್ದು, ಆದರೆ ಆಕೆಯ ಬಯಕೆ ತೀರಿಸುತ್ತೇನೆಂದು ಒಂದು ಗಾಜಿನ ಪಾತ್ರೆಯಲ್ಲಿ ಪರಿಮಳಯುತ್ತ ನೀರು ತುಂಬಿ ಚಂದ್ರನ ಪ್ರತಿಬಿಂಬ ಆ ಪಾತ್ರೆಯಲ್ಲಿ ಕಾಣಿಸಿ ಆ ನೀರನ್ನು ಕುಡಿಸಿ ಆಕೆ ಚಂದ್ರನನ್ನು ನುಂಗಿದಂತೆ ತೋರಿಸುತ್ತಾನೆ. ಬಯಕೆ ಈಡೆರಿದ ರಾಣಿಗೆ ಹುಟ್ಟಿದ ಮಗನನ್ನು ಚಾಣಾಕ್ಯನಿಗೆ ಕೊಟ್ಟರು ಆ ಮಗುವಿಗೆ ಚಂದ್ರಭುಕ್ತನೆಂಬ ನಾಮಕರಣ ಮಾಡಿ ಚಿಕ್ಕಂದಿನಿಂದಲೇ ಮಗುವಿಗೆ ಬೆಣ್ಣೆಯನ್ನು ತಿನ್ನುವಾಗ ಬೆಣ್ಣೆಯೊಂದಿಗೆ ಅನ್ನದೊಳಗೆ ವಿಷ ಬೆರಸಿ ತಿನ್ನಿಸತೊಡಗಿದನು, ಚಂದ್ರಬುಕ್ತ ಹದಿನಾರು ಪ್ರಾಯವಾಯಿತು. ಚಾಣಾಕ್ಯನು ಸೈನ್ಯದ ಸಿದ್ಧತೆ ಮಾಡಿದನು ಕೋಟೆ ಕಟ್ಟಿಸಿ ಪಟ್ಟಣ ನಿರ್ಮಿಸಿ ಮಹಾಪದ್ಮನೊಂದಿಗೆ ಯುದ್ಧ ಮಾಡಿದಾಗ ಮಹಾಪದ್ಮನು ಸೋತು ಬಾಡಿ ಹೋದನು ಸುಬಂಧ ಸೆರೆ ಸಿಕ್ಕನು ಚಂದ್ರ ಭುಕ್ತನಿಗೆ ಪಟ್ಟವಾಯಿತು. ಮಹಾಪದ್ಮನ ಮಡದಿ ಚಂದ್ರಮತಿ ಚಂದ್ರಬುಕ್ತನ ಮಹಾರಾಣಿಯಾದಳು. ರಾಜ್ಯವು ಆಪಾರದ್ರವ್ಯದಿಂದ ತುಂಬಿತು.

ಹೀಗಿರಲು ಚಂದ್ರಮತಿ ಗರ್ಭಿಣಿಯಾಗಿ ನವಮಾಸ ತುಂಬಲು. ಒಮ್ಮೆ ಅರಸನ ಜೊತೆ ರಾಣಿ ಉಟಕ್ಕೆ ಕುಳಿತಾಗ ತನ್ನ ವಿಷನ್ನವನ್ನು ರಾಣಿಗೆ ಚಂದ್ರಭುಕ್ತನು ಕೊಟ್ಟಾಗ ಅದನ್ನು ತಿನ್ನಲು ಬಾಯಿಗೆ ಇಟ್ಟಾಗ ಚಾಣಾಕ್ಯನು ಅವಳ ತಲೆಕಡಿದನು. ಗರ್ಭವನ್ನು ಸೀಳಿ ಮಗುವನ್ನು ಹೊರತೆಗೆದನು 'ಹಾ ಚಂದ್ರಮತಿ ನನ್ನ ನಲ್ಲಳೆ' ಎಂದು ವಿಯೋಗದಿಂದ ಚಂದ್ರಭುಕ್ತ ದುಃಖದಿಂದ ಸತ್ತುಹೋದನು ಚಾಣಾಕ್ಯ ಅಮಗುವಿಗೆ 'ಬಿಂದುಸಾಗರ' ಎಂದು ಹೆಸರಿಟ್ಟ ಅವನಿಗೆ ರಾಜ್ಯ ಪಟ್ಟವಾಯಿತು.

ಚಾಣಾಕ್ಯನಿಗೆ ಸಂಸಾರ ಭೋಗಗಳಲ್ಲಿ ವಿರಕ್ತಿಯುಂಟಾಗಿ ಸುಬಂಧವಿಗೆ ಬಿಂದುಸಾಗರನ ಮಂತ್ರಿಯಾಗಿಸಿ ಮತಿವರಾಚಾರ್ಯರ ಬಳಿ ತಪಸ್ಸು ಮಾಡಿ ಸಂಚರಿಸುತ್ತ ಸೂಣ್ಮೆನದಿಯ ತುರಮಟ್ಟಿಗೆ ಬಂದಾಗ ಸುಬಂಧು ಪೂರ್ವದ್ವೇಷದಿಂದ ಋಷಿಗಳು ಚಳಿಯಲ್ಲಿ ಕಷ್ಟ ಪಡುತ್ತಿದ್ದಾರೆಂದು ಬಗೆದು ಸುತ್ತಲು ಬೆಂಕಿ ಇಟ್ಟು ಹೋದನು. ಚಾನಾಕ್ಯನು ಕ್ಷಮೆಯನ್ನು ಭಾವಿಸಿ ಸೌಧರ್ಮ ಮೊದಲಾದ ಕಲ್ಪದಲ್ಲಿ ಮೋಕ್ಷ ಪಡೆದರು.

ಈ ರೀತಿಯಾಗಿ ಈ ಕಥೆ ಮಂತ್ರಿಕಾಪಿಯು ಅರಸ ಪದ್ಮನ ಮಹಾರಾಣಿ ಸುಂದರಿಯಲ್ಲಿ ಮೋಹಿತನಾಗುವುದು ಮೋಹದಿಂದ ಅರಸನ್ನು ಮೋಸದಿಂದ ಕೊಂದು ಹಾಕುವುದು. ವಸಂತಕರಿಗೆ ಮಹಾಪದ್ಮ ಕಾಪಿಯನ್ನು ನೆಲಮನೆಯಲ್ಲಿ ಬಂದಿಸುವುದು. ಸುಬಂದುವಿನ ಯೋಜನೆಗಳು. ಚಾಣಾಕ್ಯನ ಜಾಣತನ, ಕೋಪ ಯುಕ್ತಿ ಜೇಡರ ಮುದುಕಿ ಚಾಣಾಕ್ಯನಿಗೆ ಪಾಠ ಕಲಿಸುವುದು. ಚಂದ್ರಮತಿಯ ಬಯಕೆ ಈ ಮುಂತಾದ ಅಂಶಗಳು ಸಂಪೂರ್ಣವಾಗಿ ಧರ್ಮ ನಿರಕ್ಷೇಷ ವಾತಾವರಣದಲ್ಲಿದ್ದಂತೆ ತೋರುತ್ತವೆ. ಕಥೆಯಲ್ಲಿ ಮತ್ತೆ ಅಭಿರುಚಿ ಹುಟ್ಟಿಸಿ ಕೇಳುಗರಿಗೆ ಅಭಿರುಚಿ ಮನರಂಜನೆ ಒದಗಿಸಿ ಶ್ರಾವಕರಿಗೆ ಧಾರ್ಮಿಕ ಮತ್ತು ಆಧ್ಯಾತ್ಮಿಕ ಸಂಗತಿಗಳಿಂದ ಮತ್ತೆ ಕಥೆಗೆ ಬದಲಾವಣೆ ನೀಡುತ್ತದೆ.

ಅಲ್ಲದೆ ಈ ಕಥೆಯು ಶ್ರಾವಕರು ಆಚರಿಸಬೇಕಾದ ಧಾರ್ಮಿಕ ವಿಚಾರಗಳನ್ನು ಪಠ್ಯದ ಬೋಧಕವಾಗಿ ಸಾಂಸರಿಕ ಭೋಗಗಳಲ್ಲಿ ವಿರಕ್ತಿಯನ್ನು ಸಾದರಪಡಿಸುವುದರೊಂದಿಗೆ ರಾಜನೀತಿಯ ಶಾಸ್ತ್ರವನ್ನು ಪಠ್ಯವಾಗಿ ನಾಲ್ಕು ವೇದ ಆರು ಅಂಗ ಹದಿನೆಂಟು ಧರ್ಮಶಾಸ್ತ್ರ ಪ್ರಮಾಣ, ಛಂದ, ಅಲಂಕಾರ, ನಿಘಂಟು, ಕಾವ್ಯ, ನಾಟಕ, ಶಾಲಿಹೋತ್ರ, ವೈದ್ಯ, ಸಾಮುದ್ರಿಕ, ನೀತಿ ಶಾಸ್ತ್ರ ಮೊದಲಾದವುಗಳು ಅಗ್ರಹಾರದಲ್ಲಿ ಪಠ್ಯವಿಷಯಗಳಾಗಿ ಕಲಿಸುತ್ತಿದ್ದರೆಂಬುವುದು ವಿದಿತವಾಗುತ್ತದೆ.

### ೫.೧೯ ವೃಷಭಸೇನ ರಿಸಿಯರ ಕಥೆ:

ಈ ಕಥೆಯು ಯಾವ ವಿಶೇಷ ಘಟನೆಗಳಿಲ್ಲದೆ ಉಪಸರ್ಗವನ್ನು ಸದ್ಗತಿಯನ್ನು ಪಡೆದ ಒಬ್ಬರಿಸಿಯ ಕಥೆಯುನ್ನು ಒಳಗೊಂಡಿದೆ.

ದಕ್ಷಿಣಾ ಪಥದಲ್ಲಿ ಕರಹಟನೆಂಬ ನಾಡು ಅದರಲ್ಲಿ ಕುಣಾಳಂಬ ಪಟ್ಟಣ. ಆ ಪಟ್ಟಣವನ್ನು ಧನದ ಎಂಬ ಅರಸನು ಆಳುತ್ತಿದ್ದನು ಆತನ ಹೆಂಡತಿ ಪದ್ಮಶ್ರೀ ವಿಷ್ಣುಮತ್ಸ ಅರಸನ ಮಂತ್ರಿ ಬಹಳ ದೊಡ್ಡ ಪಂಡಿತನಾಗಿದ್ದನು. ಒಂದು ದಿನ ವೃಷಭಸೇನನೆಂಬ ಆಚಾರ್ಯರು ದೊಡ್ಡ ಋಷಿಸಮೂಹದಿಂದ ವಿಹಾರಿಸುತ್ತ ಬಂದು ಊರಿನ ಬಸದಿಯಲ್ಲಿ ತಂಗಿದ್ದರು. ಪಟ್ಟಣದ ಜನರು ರಾಜನು ಭಕ್ತಿಯಿಂದ ಅವರನ್ನು ಪೂಜಿಸಿದರು ಮಂತ್ರಿ ವಿಷ್ಟ ಮತ್ಸ್ಯನು ಸಹಿಸದೆ ಮಾತ್ಸರ್ಯದಿಂದಲೂ ತನ್ನ ಪಾಂಡಿತ್ಯದ ಗರ್ವದಿಂದ ಆಚಾರ್ಯ ವೃಷಭಸೇನಾ ಚಾರ್ಯರೊಂದಿಗೆ ವಾದ ಮಾಡಿ. ನೆರೆದ ಜನರೆದುರಿಗೆ ಸೋತು ತಲೆತಗ್ಗಿಸಿದನು. ಈ ಮಾತ್ಸರ್ಯದಿಂದ ರಾತ್ರಿ ಬಂದು ಬಸದಿಗೆ ಬೆಂಕಿಯನ್ನು ಹಚ್ಚಿಕೊಂಡು ಹೋರಟು ಹೋದನು. ವೃಷಭಸೇನಾಚಾರ್ಯರು ಇತರರು ಕ್ಷಮೆಯನ್ನು ಭಾವಿಸಿ ಚತುರ್ವಿದ ಆಹಾರಕ್ಕೂ ಶರೀರಕ್ಕೊ

ಮೊದಲಾದ ಋಷಿಗಳು ನಿವೃತ್ತಿಗೈಯ್ದು. ಶುಭ ಪರಿಣಾಮದಿಂದ ರತ್ನತ್ರಯ ಸಾಧಿಸಿ ಮಡಿದು. ಹದಿನಾಲ್ಕನೆಯ ಕಲ್ಪದಲ್ಲಿ ದೇವನಾಗಿ ಜನಿಸಿದನು.

ಈ ಕಥೆಯಲ್ಲಿ ಯಾವುದೇ ವರ್ಣಾನಾತ್ಮಕ ಭಾಗಗಳಿಲ್ಲಿ ಕಥಾಕಾರನು ನೇರವಾಗಿ ಪೌರಣಿಕ ಧಾರ್ಮಿಕ ಮಹಾಪುರುಷರು ತಮಗಾದ ಉಪಸರ್ಗ ಮತ್ತು ಪರಿಷಹಗಳನ್ನು ಶಾಂತವಾಗಿ ಸಹಿಸಿ ರತ್ನತ್ರಯ ಸಾಧಿಸಿದ್ದನ್ನು. ಆ ಉದ್ದೇಶವನ್ನು ಈ ಕಥೆಯಲ್ಲಿ ಮುಟ್ಟಲು ಪ್ರಯತ್ನಿಸಲಾಗಿದೆ.

ಶೈಕ್ಷಣಿಕವಾಗಿ ಈ ಕಥೆಗಳಲ್ಲಿಯೂ ಪ್ರಾಚೀನ ಪೌರಾಣಿಕ ಮತ್ತು ಅರ್ಧಿಕ ಐತಿಹಾಸಿಕ ಧಾರ್ಮಿಕ ಮಹಾಪುರುಷರೆನಿಸಿಕೊಂಡವರು. ವಿವಿಧ ಉಪಸರ್ಗ ಪರಿಷಹಗಳನ್ನು ಧೈರ್ಯ ಮತ್ತು ಸ್ಥೈರ್ಯದಿಂದ ಅವೆಲ್ಲವನ್ನು ಸಹಿಸುವ ಮೋಕ್ಷ ಪಡೆಯುವ ಉದ್ದೇಶವಿದ್ದರೂ ಸಹಿತ ಆರಾಧಕನಿಗೆ ವಂದನೆಗಳನ್ನು ಸಲ್ಲಿಸಲು ಬರುವ ಧಾರ್ಮಿಕ ಅಗುಂತಕರಿಗೆ (ಶ್ರಾವಕರಿಗೆ) ಬೋಧಿಸಬೇಕಾದ ಅವಶ್ಯಕತೆಯನ್ನು ಹೊಂದಿವೆ. ಜೈನ ಧರ್ಮದ ಪ್ರಮುಖ ಆಚಾರ ವಿಚಾರಗಳನ್ನು ಪೂಜಿಸುವುದರ ಜೊತೆಗೆ ಚಿಕ್ಕ ಶ್ರಾವಕರಿಗೆ (ಜೈನ-ಗ್ರಹಿಸಿ-ಗ್ರಹಿಕೆಯಾದ ನೀತಿಸಂಹಿತೆಯೇ) ಕಥೆ ಉಪಕಥೆ ಘಟನೆಗಳ ಮೂಲಕ ಬೋಧಿಸುವ ಒಂದು ಉದ್ದೇಶವಾಗಿದೆ.

ಈ ರೀತಿಯಾಗಿ ಈ ೧೯ ನೀತಿ ಕಥೆಗಳು, ಶೈಕ್ಷಣಿಕ ಪಠ್ಯವಾಗಿ ವಿದ್ಯಾರ್ಜನೆ ಮಾಡಿಕೊಳ್ಳುವಾಗ ಮಾನವೀಯ ಮೌಲ್ಯಗಳ ಮೂಲಕ ಈಗಿನ ಆರೋಗ್ಯಪೂರ್ಣ ಸಮಾಜ ನಿರ್ಮಾಣ, ಸದೃಢ, ಸಶಕ್ತ ರಾಜ್ಯಭಾರಕ್ಕೆ ವ್ಯಕ್ತಿಯ ವ್ಯಕ್ತಿತ್ವ ನಿರ್ಮಾಣದಲ್ಲಿ ಆ ಕಾಲದ ಶಿಕ್ಷಣ ವ್ಯವಸ್ಥೆಯು ನೀತಿಗಳ ಮೂಲಕ ಹೇಗೆ ಪೂರಕವಗಿತ್ತು ಎಂಬುದನ್ನು ಈ ಕಥೆಗಳ ಹಿನ್ನಲೆಯಲ್ಲಿ ನಿರೂಪಿತವಾಗಿದೆ.

## ಟಿಪ್ಪಣಿಗಳು

೧. ಟಿ. ಕೇಶವ ಭಟ್ಟ : ಸಂ. ದಿವಂಗತ. ಸೀತಾರಾಮಯ್ಯ : ವಡ್ಡಾರಾಧನೆಯ ಅಧ್ಯಯನ: ಪುಟ ಸಂಖ್ಯೆ – ೫೩

೨. ಡಾ. ಬಿ. ಕೆ. ಖಡಬಡಿ : ವಡ್ಡಾರಾಧನೆ ಸಂಶೋದಾನ್ಮತಕ ಅಧ್ಯಯನ : ಪುಟ ಸಂಖ್ಯೆ – ೫೭-೫೮

೩. ಟಿ. ಕೇಶವ ಭಟ್ಟ : ಸಂ. ದಿವಂಗತ. ಸೀತಾರಾಮಯ್ಯ : ವಡ್ಡಾರಾಧನೆಯ ಅಧ್ಯಯನ: ಪುಟ ಸಂಖ್ಯೆ – ೬೪-೬೫

೪. ಡಾ. ಬಿ. ಕೆ. ಖಡಬಡಿ : ವಡ್ಡಾರಾಧನೆ ಸಂಶೋದಾನ್ಮತಕ ಅಧ್ಯಯನ : ಪುಟ ಸಂಖ್ಯೆ -೬೦ - ೬೧

೫. ಅದೇ : ಪುಟ ಸಂಖ್ಯೆ – ೭೪

೬. ಟಿ. ಕೇಶವ ಭಟ್ಟ : ಸಂ. ದಿವಂಗತ. ಸೀತಾರಾಮಯ್ಯ : ವಡ್ಡಾರಾಧನೆಯ ಅಧ್ಯಯನ: ಪುಟ ಸಂಖ್ಯೆ – ೮೨

ಶಿವಕೋಟಾಚಾರ್ಯ ವಿರಚಿತ ವಡ್ಡಾರಾಧನೆ ಹಳಗನ್ನಡದಲ್ಲಿಯ ಗದ್ಯ ಕಥಾ-ಸಂಕಲನಾ ಕೃತಿಯಾಗಿದೆ. ಈ ಕೃತಿಯನ್ನು ಸಂಪಾದಿಸಿದ ಡಾ.ಡಿ.ಎನ್.ನರಸಿಂಹಚಾರ್ಯ, ರಂ, ಶ್ರೀ.ಮುಗಳಿ ಅವರ "ಕನ್ನಡ ಸಾಹಿತ್ಯ ಚರಿತ್ರೆ", ಡಾ.ಹಂಪ. ನಾಗರಾಜಯ್ಯರವರ "ಸಮಗ್ರ ವಡ್ಡಾರಾದನೆ", ಆರ್.ಎಲ್. ಅನಂತ ರಾಮಯ್ಯ ನವರು ಬರೆದ "ವಡ್ಡಾರಾಧನೆ ಕಥಾಲೋಕ" ಎಂಬ ಹೊಸಗನ್ನಡ ಕಥಾರೂಪ, ಡಾ.ಬಿ.ಕೆ.ಖಡಬಡಿರವರ ಪಿ.ಎಚ್.ಡಿ. ಮಹಾಪ್ರಬಂಧ, ವಡ್ಡಾರಾಧನೆ ಸಂ. ದಿವಂಗತ. ಸೀತಾರಾಮಯ್ಯ, "ವಡ್ಡಾರಾಧನೆ ಗದ್ಯಾನುಯವಾದ" ಟಿ.ಕೇಶವ ಭಟ್ಟ, ಮುಂತಾದ ಕೃತಿಗಳನ್ನು ವಡ್ಡಾರಾಧನೆಯಲ್ಲಿ ಶೈಕ್ಷಣಿಕ ಚಿಂತನೆಗಳು ಅಧ್ಯಯನಕ್ಕೆ ಪೂರಕವಾದ ಸಾಂದರ್ಭಿಕ ಆಕರ ಗ್ರಂಥಗಳಾಗಿವೆ.

ವಡ್ಡಾರಾಧನೆಯ ಶೈಕ್ಷಣಿಕ ಚಿಂತನೆಗೆ ಅನುಗುಣವಾಗಿ ಕೃತಿಯ ಹೆಸರು ಕುರಿತು ಚರ್ಚೆನಡೆದಾಗ ವಡ್ಡಾರಾಧನೆ ಎಂಬ ಶಬ್ಧಾರ್ಥವನ್ನು ನಾವು ಲಕ್ಷಿಸಿದಾಗ ವೃದ್ಧ + ಆರಾಧನೆ ಎಂದು ವೃದ್ದ ಎಂದರೆ ಪೂರ್ಣವಾಗಿ ಬೆಳೆದವನು ಪೂರ್ವಕಾಲದವನು ಎಂಬ ಅರ್ಥಕೊಡುವುದರ ಜೊತೆಗೆ ಗೌರವಾರ್ಹವಾಗಿ ಶ್ರೇಷ್ಠಿ, ಜ್ಞಾನಿ, ಯತಿ, ಮಹಾಪುರುಷರೆಂದು, ಆರಾಧನೆ ಎಂದರೆ ಸೇವೆ, ಪೂಜೆ, ಆಚರಣೆ ಜೈನ ಸಿದ್ಧಾಂತದ ದೃಷ್ಟಿಯಲ್ಲಿ ರತ್ನತ್ರಯಗಳ ಸಾಧಿಸಿದವ ಎಂದು ಅರ್ಥವಾಗುತ್ತದೆ. ಜೈನ ಯತಿಗಳು, ಜ್ಞಾನಿಗಳು ಮಾಡಿದ ಸಫಲವಾದ ಆರಾಧನೆಗಳೇ ವಡ್ಡಾರಾಧನೆ ಎಂಬುದು ವಿಧಿತವಾಗುತ್ತದೆ.

ವಡ್ಡಾರಾಧನೆಯ ಕರ್ತೃ ಯಾರೆಂಬುದನ್ನು ಹೇಳಲು ನಿಶ್ಚಿತ ಆಧಾರಗಳಿಲ್ಲದಾಗ ಕೆಲವು ಬಾಹ್ಯ ಮತ್ತು ಆಂತರಿಕ ಅಂಶಗಳನ್ನು ಪರಶೀಲಿಸಿದ ನಂತರ ಕೃತಿಕಾರನು ಒಬ್ಬ ವಿದ್ವಾಂಸನು ಶ್ರಾವಕನಾಗಿರದೆ ಅತನು ನಿಸ್ಸಂದೇಹವಾಗಿ ಜಿನಸೇನ ಉದಾರ ಪಾಂಡಿತ್ಯ ಪೂರ್ಣ ಕಥಾ ಕುಶಲನಾದ ಒಬ್ಬ ದಿಗಂಬರ ಮುನಿಯಾಗಿದ್ದು ಸದ್ಯಕ್ಕೆ ಶಿವಕೋಟ್ಯಾಚಾರ್ಯನೆ ಈ ವಡ್ಡಾರಾಧನೆಯ ಕರ್ತೃ ಎಂದು ನಂಬಲಾಗಿದೆ.

ವಡ್ಡಾರಾಧನೆಯ ಕಾಲವನ್ನು ನಿಷ್ಕರ್ಷವಾಗಿ ಹೇಳುವುದು ಬಹಳ ತೊಡಕಿನ ಮಾತಾಗಿದೆ ಕೆ.ಬಿ. ಪಾಠಕ್ ರವರು ಕ್ರಿ.ಶ.1188 ಇದರ ಕಾಲವೆಂದು ಕವಿಚರಿತೆಕಾರರು ಕ್ರಿ.ಶ. 1180, ಎಂದು ಈ ಕೃತಿಯ ಆಂತರಿಕ ಪ್ರಮಾಣಗಳಿಂದ ಗೋವಿಂದ ಪೈಗಳು 6ನೇ ಶತಮಾನಕ್ಕಿಂತ ಈಚಿನದು ಎಂದು, ಡಾ. ಎ.ಎನ್.ಉಪಾದ್ಯಾಯರು ಬಹುಶಃ 11ನೇ ಶತಮಾನಕ್ಕೆ ಸೇರಿದ ಕೃತಿ ಎಂದು, ಅಭಿಪ್ರಾಯ ಪಟ್ಟಿದ್ದಾರೆ. ಡಾ.ಡಿ.ಎಲ್.ನರಸಿಂಹಚಾರ್ಯರವರ ಪ್ರಕಾರ 10ನೇ

ಶತಮಾನಕ್ಕಿಂತ ಹಿಂದಿನದು ಎಂಬ ಅಭಿಪ್ರಾಯ ಪಟ್ಟಿದ್ದಾರೆ, ಸದ್ಯ ಈ ಕೃತಿಯ ಕಾಲ ಕ್ರಿ.ಶ.920 ಎಂದು ಒಪ್ಪಲಾಗಿದೆ.

ವಡ್ಡಾರಾಧನೆಯ ಕಾಲದ ಶೈಕ್ಷಣಿಕ ಚಿಂತನೆಗಳ ಪೂರಕ ಪರಿಸರವು ಉತ್ತಮ ಸಾಮಾಜಿಕ ಪರಿಸರದೊಂದಿಗೆ ಸಾಮಾನ್ಯ ಜನಜೀನವು ಬಾಳಿನ ಸರಿಯಾದ ಮಾರ್ಗಗಳನ್ನು ಅನುಸರಿಸುವಾಗ ಅನೇಕ ಮಾರ್ಗದರ್ಶಕ ಕಥೆಗಳ ಮೂಲಕ ಪ್ರತಿಬಿಂಬಿತವಾದ ಅಂದಿನ ಸಮಾಜದಲ್ಲಿನ ಅರಸ ಅರಸಿ, ಅರಸಕುಮಾರ, ವ್ಯಾಪಾರಸ್ಥರು, ಸಾಮಾನ್ಯಜನರು ಧಾರ್ಮಿಕ ಮತ್ತು ನೀತಿಯುಕ್ತ ಜೀವನ ನಡೆಸುತ್ತಿದ್ದರೆಂಬುದು ಅಧ್ಯಯನದಿಂದ ತಿಳಿಯುವುದರ ಮೂಲಕ ಸಾಂಸ್ಕೃತಿಕ ಪರಿಸರವು ಸಂಪತ್ಭರಿತವಾಗಿತ್ತು. ಅನೇಕ ಕಥೆಗಳ ಸರಣಿಗಳಾದ ಪ್ರಾಣಿಕಥೆಗಳು, ರಮ್ಯಕಥೆಗಳು, ವಿನೋದ ಕಥೆಗಳು, ಮೂರ್ಖ ಕಥೆಗಳು, ಬುದ್ಧಿವಂತಿಕೆ ಕಥೆಗಳು, ಕಿನ್ನರ ಕಥೆಗಳ ಮೂಲಕ ವೈವಿಧ್ಯಮಯವಾದ ಸಾಂಸ್ಕೃತಿಕ ಪರಿಸರವನ್ನು ಕಾಣುತ್ತೇವೆ. ಅಲ್ಲದೆ ಅತಿ ಮಾನುಷ ಶಕ್ತಿಗಳ ಜೊತೆಗೆ ಮಾಟ, ಮಂತ್ರ, ಜ್ಯೋತಿಷ್ಯ ಮುಂತಾದ ನಂಬಿಕೆಗಳ ಪ್ರಸ್ತಾಪವಿರುತ್ತದೆ.

ರಾಜಶ್ರೇಷ್ಠಿಯು ಅರಸನ ವ್ಯಾಪಾರ, ವ್ಯವಹಾರ ನೋಡಿಕೊಳ್ಳುವ ಅಧಿಕಾರಿಯಾಗಿದ್ದು, ಈತನ ಹೊರತಾಗಿ ಅನೇಕ ಪ್ರಕಾರದ ವ್ಯಾಪಾರಿವರ್ಗಗಳೊಂದಿಗೆ ಬೇಸಾಯ ವಿವಿಧ ಉದ್ಯೋಗಗಳ ಉಲ್ಲೇಖದೊಂದಿಗೆ ಅಂದಿನ ವ್ಯಾಪಾರ ವ್ಯವಹಾರಗಳ ಚಿತ್ರಣವನ್ನು ಕಾಣುವುದಾಗಿದೆ.

ಅಲ್ಲದೆ ರಾಜ್ಯಾಡಳಿತವು ಪ್ರಧಾನ ಮಂತ್ರಿ ಪುರೋಹಿತ ರಾಜಶ್ರೇಷ್ಠಿ ಇತರ ಮಂತ್ರಿಗಳ ಮತ್ತು ಅಧಿಕಾರಿಗಳ ಸಲಹೆಯೊಂದಿಗೆ ಆಡಳಿತವು ಸುಗಮವಾಗಿತ್ತು.

ವಡ್ಡಾರಾಧನೆ ಕಾಲದ ಶಿಕ್ಷಣದ ಸ್ವರೂಪ ಬ್ರಾಹ್ಮಣಿಕ ಪಾರಂಪರಿಕವಾದ ಶಿಕ್ಷಣ ಪದ್ಧತಿಯಲ್ಲಿ ಸಾಗಿತ್ತು. ಶಿಷ್ಯತ್ವ ಪ್ರಧಾನ ಶಾಸ್ತ್ರೋಕ್ತ ಪವಿತ್ರ ಕಾರ್ಯವಾಗಿದ್ದು, ಒಳ್ಳೆಯ ವಾರ ದಿನ ವಿದ್ಯಾನಕ್ಷತ್ರದಲ್ಲಿ ಉತ್ತಮ ಸಂಸ್ಕಾರದೊಂದಿಗೆ ವಿದ್ಯೆ ಪ್ರಾರಂಬಿಸಲಾಗುತ್ತಿತ್ತು . ವಿದ್ಯಾರ್ಥಿಗೆವಿದ್ಯೆ ದಯಪಾಲಿಸುವ ಗುರು ಶಿಷ್ಯನ ಚಾರಿತ್ರ್ಯವನ್ನು ರೂಪಿಸುವಲ್ಲಿ ತಕ್ಕ ಬೋಧನೆಯೊಂದಿಗೆ ಶೀಲ ಸಂವರ್ಧನೆ, ಪ್ರಾಚೀನ ಸಾಂಸ್ಕೃತಿಕ ಪರಂಪರೆಯ ಸಂರಕ್ಷಣೆ ಒಬ್ಬ ಪ್ರಜೆಯಾಗಿ ಆತ ಮಾಡಬೇಕಾದ ಕರ್ತವ್ಯಗಳು ಆತನ ಸಾಮಾಜಿಕ, ರಾಜಕೀಯ ಧಾರ್ಮಿಕ ನಿರ್ವಹಣೆಗೆ ಪೂರಕವಾದ ವಿದ್ಯಾಭ್ಯಾಸದೊಂದಿಗೆ ನಾಲ್ಕು ವೇದ, ಆರು ಅಂಗ, ಹದಿನೆಂಟು ಧರ್ಮಶಾಸ್ತ್ರ ಮೀಮಾಂಸೆ, ನ್ಯಾಯ, ವ್ಯಾಕರಣ, ಪ್ರಮಾಣ, ಛಂದಸ್ಸು ನಿಘಂಟು ಕಾವ್ಯ ನಾಟಕ ಚಾಣಕ್ಯ, ಸಾಮುದ್ರಿಕ ಶಾಲಿಹೋತ್ರ ಜ್ಯೋತಿಷ್ಯ,

ಮಂತ್ರವಾದ ಮುಂತಾದ ಪಠ್ಯವಿಷಯಗಳೊಂದಿಗೆ ಸಮಾಜದಲ್ಲಿ ಒಳ್ಳೆಯ ವ್ಯಕ್ತಿತ್ವವನ್ನು ರೂಪಿಸುತ್ತಿದ್ದನು.

ಹೀಗೆ ವಿದ್ಯಾರ್ಜನೆಯ ನಂತರ ಸಶಕ್ತ-ಸದೃಢ ರಾಜ್ಯ ನಿರ್ಮಾಣ ಕಾರ್ಯಕ್ಕೆ ಶಿಕ್ಷಣವು ತುಂಬ ಉಪಯುಕ್ತವಾಗಿತ್ತು.

ಪಂಡಿತರು ಶಿಕ್ಷಕರು ರಾಜ್ಯದ ಸಂಪತ್ತುಗಳಾಗಿದ್ದು ಅರಸನಿಂದ ಸಾಮಾನ್ಯ ಪ್ರಜೆಯವರೆಗೂ ಗುರುಗಳನ್ನು ಗೌರವದಿಂದ ಪೂಜ್ಯ ಭಾವದಿಂದ ಕಾಣುತ್ತಿದ್ದರು. ಗುರುಗಳ ತಮ್ಮ ಪದವಿಗಳಾದ ಧರ್ಮಾಚಾರ್ಯ, ಶಿಲ್ಪಾಚಾರ್ಯ, ಕಲಾಚಾರ್ಯಗಳಿಂದ ತನ್ನ ಸ್ಥಾನಮಾನ ರಕ್ಷಣೆಗೆ ಬೇಕಾದ ವರ್ಚಸ್ಸು ವಿನಯ ಶೀಲದೊಂದಿಗೆ ತನಗೆ ತಿಳಿದ ಜ್ಞಾನವನ್ನು ಯಾವ ಸ್ವಾರ್ಥಭಾವನೆ ಇಟ್ಟುಕೊಳ್ಳದೆ ಶಿಷ್ಯರಿಗೆ ಬೋಧಿಸುವುದರ ಮೂಲಕ ಸಮಾಜ ರಾಜ್ಯದ ಸಂಪತ್ತಾಗಿ ಕಾರ್ಯನಿರ್ವಹಿಸುತ್ತಿದ್ದರು.

ಶಿಷ್ಯತ್ವವನ್ನು ಪಡೆಯಬೇಕಾದ ವಿದ್ಯಾರ್ಥಿಯು ಸಹಿತ ಬ್ರಹ್ಮಚರ್ಯಪಾಲನೆ ಅಂದರೆ - ಇದರಿಂದಾಗಿ ನಿರ್ದಿಷ್ಟ ವಿಚಾರಗಳನ್ನು ನಿಗಧಿತ ಅವಧಿಯಲ್ಲಿ ಕಲಿಯಲು ಸಾಧ್ಯವಾಗುತ್ತಿತ್ತು. ಕಾರಣ ಬ್ರಹ್ಮಚರ್ಯ ಪಾಲಿಸುತ್ತಿದ್ದರು. ವಿದ್ಯಾರ್ಥಿಯು ವಿದ್ಯಾರ್ಜನೆಮಾಡಬೇಕಾದಾಗ ಗುರುವಿನ ಶುಶ್ರೋಷತೆಮಾಡಿ ಅತ್ಯಂತ ಭಕ್ತಿಯಿಂದ ಕಠಿಣ ಜೀವನದ ಅನುಶಾಸನ, ಸಂಯಮ, ಸಹನೆಯೊಂದಿಗೆ ಬಿಕ್ಷಾಟನೆ ಮಾಡಿ ಹಗಲು ಇರುಳು ಅಭ್ಯಾಸ ಮಾಡಬೇಕಾಗಿತ್ತು ಎಂದು ವಿದ್ಯಾರ್ಥಿ ಜೀವನವನ್ನು ತಿಳಿಯ ಪಡಿಸುತ್ತದೆ.

ಬೋಧನಾ ಕಾರ್ಯವು ವಿದ್ಯಾರ್ಥಿಯ ವೈಯಕ್ತಿಕ ಬೋಧನೆಯೊಂದಿಗೆ ಸಮೂಹಿಕ ಬೋಧನೆ ಮೂಲಕ ಶ್ರವಣ, ಮನನ, ನಿದಿಧ್ಯಾಸನ ಮೂಲಕ ಪ್ರಮುಖವಾಗಿ ಕ್ರಿಯೆ, ವಾಚನ ಪಠಣ ಪ್ರತಿಕ್ರಿಯೆ ಪ್ರಭಾವ ಇತ್ಯಾದಿ ಮುಖಾಂತರ ಸಾಗುತ್ತಿತ್ತು.

ಶಿಕ್ಷಣ ಧೋರಣೆಗಳಾದ ಜ್ಞಾನರ್ಜನೆಯ ಮೂಲಕ ಮನಸ್ಸು ಅಣಿಗೊಳಿಸುವುದು, ವ್ಯಕ್ತಿಯಲ್ಲಿ ಅಡಗಿರುವ ಮೌಲಿಕ ಶಕ್ತಿಯನ್ನು ಸಾರ್ಥಕ ಪಡೆಸಲು ಮನಸ್ಸಿಗೆ ತರಬೇತಿ ನೀಡುವುದರ ಮೂಲಕ ಜ್ಞಾನ ಸಂಪಾದನೆ ಜೊತೆಗೆ ಸದೃಢವಾದ ದೇಹದಲ್ಲಿ, ಸದೃಡವಾದ ಮನಸ್ಸನ್ನು ನಿರ್ಮಿಸುವುದರ ಮೂಲಕ ನಶ್ವರವಾದ ಶಾರೀರಕ್ಕೆ ಮಹತ್ವ ಕೊಡದೆ ಆಧ್ಯಾತ್ಮಿಕ ಸತ್ಯ ಜ್ಞಾನದ ಮುಕ್ತಿಯನ್ನು ಪಡೆಯುವುದು ಶಿಕ್ಷಣದ ಗುರಿಯಾಗಿತ್ತು. ಇಂದಿನ ಪ್ರಜಾಸತ್ತಾತ್ಮಕ ನಾಗರಿಕ ಪ್ರಜ್ಞೆಯ ಚಿಂತನೆಗಳು ಆ ಕಾಲದ ಶೈಕ್ಷಣಿಕ ವಿಚಾರಗಳ ಮೂಲಕ ತಿಳಿಯುವುದಾಗಿದೆ,

ವಡ್ಡಾರಾಧನೆ 19 ಕಥೆಗಳಲ್ಲಿ ಜೈನತತ್ವಗಳಿಗೆ ಅನುಗುಣವಾಗಿ ಜೀವಿಯ ಪೂರ್ವೋತ್ತರ ಭವಾವಳಿಗಳು ಕಥನಾಯಕನ ಸುಖ ದುಃಖಃ ಸಾದನೆ, ತಪಸ್ಸು, ಸಿದ್ಧಿಗಳು ಅವಧಿಜ್ಞಾನಿಗಳಾದ ಧರ್ಮೋಪದೇಶದ ಮೂಲಕ ದೀಕ್ಷೆ ಪಡೆದು ಉಪಸರ್ಗಜೈಯಿಸಿ ರತ್ನತ್ರಯಗಳ ಆಚರಣೆಯಿಂದಾಗಿ ಎಂತಹ ಪಾಪಿ ದೃಷ್ಟ ಕ್ರೋರಿ ಅನೀತಿವಂತನಾದರು ಆತನಿಗೆ ಕಾಲಾಂತರದಲ್ಲಿ ಸಧರ್ಮದ ಆಚರಣೆಯಿಂದ ಸದ್ಗತಿ ಎಂಬ ಅಂಶವು ನೀತಿ ಕಥೆಗಳ ಶೈಕ್ಷಣಿಕ ಪಠ್ಯಗಳಿಂದ ವ್ಯಕ್ತವಾಗುತ್ತದೆ.

ಈ ರೀತಿಯಾಗಿ ಕನ್ನಡದ ಮೊದಲನೆಯ ಗದ್ಯಕಥಾ ಸಂಕಲನವಾದ ವಡ್ಡಾರಾಧನೆಯಲ್ಲಿ ವಿಶಿಷ್ಟವಾದ ತಂತ್ರಗಳ ಸಂಭಾಷಣೆ ಹಿತಮಿತವಾದ ಸಾಂಸ್ಕೃತಿಕ ಪರಿಸರದೊಂದಿಗೆ ಕಥೆಯನ್ನು ಹೇಳುವಾಗ ಜನಪದ ಬೇರುಳ್ಳ ಈ ಕಥಾ ಸಂಕಲನಗಳ ಜಾಡಿನಲ್ಲಿ ಇನ್ನು ಸಂಶೋಧನೆ ಆಗತ್ಯವಾಗಿದೆ.

೧. ಕರ್ನಾಟಕ ಕವಿ ಚರಿತೆ ಭಾಗ-1 : ಆರ್.ನರಸಿಂಹಾಚಾರ್ಯ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು : 1961

೨. ಕನ್ನಡ ವಿಷಯ ವಿಶ್ವಕೋಶ ಜಾನಪದ : ಸಂ. ಅರವಿಂದ ಮಾಲಗತ್ತಿ : ಕುವೆಂಪು ಕನ್ನಡದ ಅಧ್ಯಯನ ಸಂಸ್ಥೆ, ಮೈಸೂರು : 2006

೩. ಕನ್ನಡ ಸಾಹಿತ್ಯ ಚರಿತ್ರೆ : ರಂ. ಶ್ರೀ. ಮುಗಳಿ : ಉಷಾ ಸಾಹಿತ್ಯ ಮಾಲೆ, ಮೈಸೂರು : 1953

೪. ಜೈನಧರ್ಮ : ಮಿರ್ಜ ಅಣ್ಣಾರಾಯ : ಡಿ.ವಿ.ಕೆ. ಮೂರ್ತಿ, ಮೈಸೂರು-4 : 1952

೫. ಜಾಗತಿಕ ಧರ್ಮಗಳು : ನವರತ್ನ ಶೇಷ : ಪ್ರಕಾಶಕರು ಸಮಾಜ ಪುಸ್ತಕಾಲಯ, ದಾರವಾಡ : 1998

೬. ಪ್ರಾಚೀನ ಭಾರತದ ಚರ್ರಿತೆ : ಡಿ.ಟಿ. ಜೋಶಿ : ವಿದ್ಯಾನಿಧಿ ಪ್ರಕಾಶನ, ಗದಗ : 2003-04

೭. ಭಾರತೀಯ ತಾತ್ವಿಕ ಪರಂಪರೆ ಮತ್ತು ಶಿಕ್ಷಣ : ಎಂ.ಎಚ್.ಶೈಲಾಜ ರಾಜೀವ ಪಿ. ಗುಂಡಾಳೆ : ವಿದ್ಯಾನಿಧಿ ಪ್ರಕಾಶನ, ಗದಗ : 2005-06

೮. ಭಾರತೀಯ ಸಂಸ್ಕೃತಿಗೆ ಜೈನ ಧರ್ಮದ ಕೊಡುಗೆ : ಮೂಲ. ಡಾ. ಹೀರಾಲಾಲ್, ಅನುವಾದ ಮಿರ್ಜಿ ಅಣ್ಣಾರಾಯ, ಸೇಡಬಾಳ್ : ಲಾಲಚಂದ ಹೀರಾಚಂದ ದೋಶಿ ಜೈನ ಸಂಸ್ಕೃತಿ ಸಂರಕ್ಷಣಾ ಸಂಘ, ಸೋಲ್ಲಾಪುರ : 1981

೯. ಮೂರು ಉಪನ್ಯಾಸಗಳು : ಗೋವಿಂದ ಪೈ : ಕನ್ನಡ ಸಂಶೋಧನ ಸಂಸ್ಥೆ, ದಾರವಾಡ : 1940

೧೦. ವಡ್ಡಾರಾಧನೆ (ಮೂತ್ತಿನ ಹಾರ) : ಸಂ. ಎನ್. ಬಸವರಾಧ್ಯ : ಕರ್ನಾಟಕ ಸಾಹಿತ್ಯ ಅಕಾಡಮಿ, ಬೆಂಗಳೂರು : 1996

೧೧. ವಡ್ಡಾರಾಧನೆ : ಶಿವಕೋಟ್ಯಾಚಾರ್ಯ ರಚಿತ, ಸಂ. ಡಾ. ಡಿ. ಎಲ್. ನರಸಿಂಹಚಾರ್ಯ : ಡಿ.ವಿ.ಕೆ ಮೂರ್ತಿ ಪ್ರಕಾಶನ, ಮೈಸೂರು : 2008

೧೨. ವಡ್ಡಾರಾಧನೆ ಕಥಾಲೋಕ (ಗದ್ಯಾನುವಾದ) : ಆರ್.ಎಲ್. ಅನಂತರಾಮಯ್ಯ : ಅರ್ಪಣ ಪ್ರಕಾಶನ, ಮೈಸೂರು : 1975

೧೩. ವಡ್ಡಾರಾಧನೆ ಗದ್ಯಾನುವಾದ : ಟಿ. ಕೇಶವ ಭಟ್ಟ : ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು : 2008

೧೪. ವಡ್ಡಾರಾಧನೆ ಸಮಗ್ರ ಅಧ್ಯಾಯನ : ಡಾ. ಹಂ. ಪ. ನಾಗರಾಜಯ್ಯ : ಸಿ.ವಿ.ಜಿ. ಪಬ್ಲಿಕೇಷನ್ಸ್ : 1999

೧೫. ವಡ್ಡಾರಾಧನೆ ಸಂಶೋಧನಾತ್ಮಕ ಅಧ್ಯಾಯನ : ಡಾ. ಬಿ.ಕೆ. ಖಡಬಡಿ : ವೀರಶೈವ ಅಧ್ಯಾಯನ ಸಂಸ್ಥೆ, ಶ್ರೀಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಗದಗ : 1996

೧೬. ವಡ್ಡಾರಾಧನೆಯಲ್ಲಿ ಸ್ತ್ರೀ : ಧವಳಶ್ರೀ : ಪದ್ಮಶ್ರೀ ಪ್ರಕಾಶನ, ದೊಡ್ಡಬೆಲೆ : 1969

೧೭. ವಡ್ಡಾರಾಧನೆ : ವಿ. ಸೀತಾರಾಮಯ್ಯ : ಪಿ.ಬಿ.ಎಚ್. ಪ್ರಕಾಶನ : 1977

೧೮. ವೈದಿಕ ಸಾಹಿತ್ಯ ಚರಿತ್ರೆ : ಎನ್.ಎಸ್. ಅನಂತರಂಗಾಚಾರ್ಯ : ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ, ಮೈಸೂರು : 1975

೧೯. ಶಿಕ್ಷಣದಲ್ಲಿ ತತ್ವಶಾಸ್ತ್ರ ಮತ್ತು ಸಮಾಜಶಾಸ್ತ್ರ : ಪಿ. ನಾಗರಾಜ : ವಿದ್ಯಾನಿಧಿ ಪ್ರಕಾಶನ, ಗದಗ : 2001-02

೨೦. ಹಿಂದೂಧರ್ಮ ಪರಿಚಯ : ಎದುರ್ಕಳ ಕೆ. ಶಂಕನಾರಾಯಣ ಭಟ್ : ಶ್ರೀ. ರಾಮಕೃಷ್ಣ ಪ್ರಕಾಶನ, ಭಾಗಮಂಡಳ : 1982

